ಶ್ರೀರಾಘವೇಂದ್ರತೀರ್ಥವಿರಚಿತ

# ಮಾಂಡೂಕೋಪನಿಷತ್‌ಖಂಡಾರ್ಥಃ



ಶ್ರೀಸುಯಮೀರಾಘವೇಂದ್ರ
ಪ್ರಕಾಶನ ಸಂಖ್ಯೆ - 41




ಶ್ರೀಸುಶೀಲೇಂದ್ರವಿಜಯಮಾಲಾ
ಸಂಖ್ಯೆ - 31

ಕಮಲೇಶ ಕುಸುಮ - 21

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಮಾಂಡೂಕೋಪನಿಷತ್ ಖಂಡಾರ್ಥಃ

ಅನುವಾದಕರು :

ವಿದ್ವಾನ್ ಚತುರ್ವೇದಿ ವೇದವ್ಯಾಸಾಚಾರ್ಯ

ಪ್ರಕಾಶಕರು :

ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು – ಬೆಂಗಳೂರು

2010

# ಸಂಸ್ಥೆಯ ಸಾಮ್ರಾಟ್ ಪೋಷಕರು




ಪೊಡವಿಗೊಡೆಯರಾದ ಶ್ರೀಗುರುರಾಯರನ್ನು ಹೃದಯಗುಡಿಯಲ್ಲಿ ಅಡಗಿಸಿ ಎಂದೂ ಮಾಸದ ಮೃದು ಮಧುರ ಮುಗ್ಧ ನಗೆಯನ್ನು ಹೊರಸೂಸುತ್ತ ತಮ್ಮ ಅಮೃತಹಸ್ತದ ಹಿಡಿಯಿಂದ ಮಂತ್ರಾಕ್ಷತೆಯನ್ನು ನೀಡುತ್ತಾ ತೇಡಿಬಂದು ಬೇಡಿದವರ ಇಷ್ಟಾರ್ಥಗಳನ್ನು ಇಡೇರಿಸುತ್ತಾ ಅನಂತ ಭಕ್ತಸಮೂಹದಿಂದ

**'ನಡೆದಾಡುವ ರಾಯರು'** ಎಂದು

ಪ್ರಾಥಃಸ್ಮರಣೀಯರಾಗಿ ಭಕ್ತಿ ಗೌರವದಿಂದ ಪೂಜಿಸಲ್ಪಡುತ್ತಿರುವ

**'ಶ್ರೀ ರಾಯರ ಕರುಣೆಯ ಕಂದರಾದ' ಪರಮಪೂಜ್ಯ**

**108 ಶ್ರೀ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು.**

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

# ಗ್ರಂಥಸಮರ್ಪಣೆ

ಭಾಷ್ಯಕಾರರಾಗಿ, ಟೀಕಾಕಾರರಾಗಿ, ಟಿಪ್ಪಣಿಕಾರರಾಗಿ,
ಶ್ರೀಮನ್ಮಧ್ವಸಿದ್ಧಾಂತವೆಂಬ ತತ್ತ್ವಜ್ಞಾನ ಕಲ್ಪವೃಕ್ಷವನ್ನು
ತಮ್ಮ ಅಪೂರ್ವ, ಅಸದೃಶ, ಶ್ರೇಷ್ಠ ಗ್ರಂಥಗಳಿಂದ
ಫಲಭರಿತವನ್ನಾಗಿಸಿ, ಆ ಪರಿಮಳಯುಕ್ತವಾದ
ಸತ್ಫಲದ ಸವಿಜೇನಿನ ತತ್ತ್ವಸುಧೆಯನ್ನು ವಸುಧೆಯೊಳು
ಸುಧೀಜನರು ಆಸ್ವಾದಿಸಿ ಆತ್ಮೋದ್ಧಾರದ ಅನುಭವವನ್ನು
ಹೊಂದಿ, ಆನಂದಿಸುವಂತೆ ಅನುಗ್ರಹಿಸಿ
ಆಶೀರ್ವದಿಸುತ್ತಿರುವ ಅತ್ಯಂತ ದಯಾಳುಗಳಾದ
ಜಗದ್ಗುರು ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ
ಇಪತ್ತೈದು ಶ್ರೇಷ್ಠಗ್ರಂಥಗಳಿಂದ ಸಮಲಂಕೃತವಾದ "ಶ್ರೀ ಗುರುರಾಜಸಂಪುಟಮ್"
ಎಂಬ ಪವಿತ್ರವಾದ ಗ್ರಂಥಪುಷ್ಪವನ್ನು
ಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ 75ನೇ ವರ್ಷದ
ವರ್ಧಂತ್ಯುತ್ಸವದ ಸವಿನೆನಪಿಗಾಗಿ ಹಾಗೂ
ಶ್ರೀಸುಯಮಿ ರಾಘವೇಂದ್ರ ಸಂಶೋಧನ ಕೇಂದ್ರದ
ಪಂಚಾದಶ ಸಂಸ್ಥಾಪನಾ ಮಹೋತ್ಸವದ ಸಂಸ್ಮರಣಾರ್ಥವಾಗಿ
ಶ್ರೀರಾಯರ ಪರಮಪಾವನ ಚರಣಕಮಲಗಳಲ್ಲಿ
ಪರಮಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ
ಅಮೃತಹಸ್ತಗಳಿಂದ ಸದ್ಭಕ್ತಿ-ಶ್ರದ್ಧಾದರ
ನಮನಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.



ಶ್ರೀಗುರುರಾಜರ ಚರಣಸೇವಕರು

ಪ್ರಕಾಶಕರು
ಶ್ರೀಸುಯಮೀ-ರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು-ಬೆಂಗಳೂರು

ದಿನಾಂಕ 23-09-2010
ಮಂತ್ರಾಲಯಂ

ಸಂಶೋಧನ ಕೇಂದ್ರದ ಸಾಮ್ರಾಟ್ ಪೋಷಕರು



ಶ್ರೀ ಸುಯಮೀಂದ್ರತೀರ್ಥರು

# ಸಾಮ್ರಾಟ್ ಪೋಷಕರು



ಶ್ರೀ ಸುಜಯೀಂದ್ರತೀರ್ಥರು



ಸಾಮ್ರಾಟ್ ಪೋಷಕರು : ಶ್ರೀ ಸುಶಮೀಂದ್ರತೀರ್ಥರು ಹಾಗೂ
ಶ್ರೀ ಸುಯತೀಂದ್ರತೀರ್ಥರು

# ಸಂಶೋಧನ ಕೇಂದ್ರದ ಸ್ಫೂರ್ತಿಮೂರ್ತಿಗಳು



ರಾಜಾ. ಶ್ರೀ. ವೇಣುಗೋಪಾಲಾಚಾರ್ಯ



ರಾಜಾ. ಶ್ರೀ. ಗುರುರಾಜಾಚಾರ್ಯ



ರಾಜಾ. ಶ್ರೀ. ಲಕ್ಷ್ಮೀನಾರಾಯಣಾಚಾರ್ಯ



ಡಾ. ಹುಲಿ. ಕೃ. ವೇದವ್ಯಾಸಾಚಾರ್ಯ

ಸಂಶೋಧನ ಕೇಂದ್ರದ ಸಂಸ್ಥಾಪಕರು

"ಶ್ರೀರಾಘವೇಂದ್ರಗುರುವಂಶಭೂಷಣಂ"

ರಾಜಾ. ಶ್ರೀ. ಗುರುರಾಜಾಚಾರ್ಯ



॥ ಶ್ರೀಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಹಂಸನಾಮಕ ಪರಮಾತ್ಮಪ್ರವರ್ತಿತ ಜ್ಞಾನಪೀಠಾಧ್ಯಕ್ಷರಾದ

ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನಾಧೀಶ್ವರರಾದ

ಶ್ರೀರಾಘವೇಂದ್ರಸ್ವಾಮಿಗಳವರ ಮಠದ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ

ಪರಮಪೂಜ್ಯ ಶ್ರೀ 108 ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರ

ಕರಕಮಲಸಂಜಾತರಾದ

ಪರಮಪೂಜ್ಯ ಶ್ರೀ 108 ಶ್ರೀಸುಶಮೀಂದ್ರತೀರ್ಥಶ್ರೀಪಾದಂಗಳವರ

ವರಕುಮಾರಕರಾದ

**ಪರಮಪೂಜ್ಯ ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ**

75 ನೇ ವರ್ಷದ ವರ್ಧಂತ್ಯುತ್ಸವದ ಸವಿನೆನಪಿಗಾಗಿ ಪ್ರಕಾಶಿಸಲ್ಪಟ್ಟ

# ಶ್ರೀಗುರುರಾಜರ ಗ್ರಂಥರತ್ನ

*॥ ಜೀಯಾತ್ ಶ್ರೀಸುಯತೀಂದ್ರತೀರ್ಥಸಂಯಮಿಮಣಿೀ ವೇದಾಂತರಾಜ್ಯೇ ಚಿರಮ್ ॥*

|| ಶ್ರೀಃ ||

|| ಶ್ರೀಮೂಲರಾಮೋ ವಿಜಯತೇತರಾಮ್ ||

|| ಶ್ರೀಗುರುರಾಜೋ ವಿಜಯತೇ ||

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಮಾಂಡೂಕೋಪನಿಷತ್ ಖಂಡಾರ್ಥಃ

ಕನ್ನಡಾನುವಾದ :

**ವಿದ್ವಾನ್ ಚತುರ್ವೇದಿ ವೇದವ್ಯಾಸಾಚಾರ್ಯ**

### ಪ್ರಾಸ್ತಾವಿಕ

ಭಾರತೀಯ ವಾಙ್ಮಯ ಸಂಪತ್ತೆಂದರೆ ಅಪೌರುಷೇಯವಾದ ವೇದಗಳು. ಇದೊಂದು ಅನಂತವಾಗಿದ್ದು ಅನಾದಿ-ಯಾಗಿದೆ. ಭಗವಂತನ ಉಪದೇಶದಿಂದ ಬಂದದ್ದು ಎಂಬುದು ಇದರ ಮತ್ತೊಂದು ಹಿರಿಮೆ. ಗೀತೆಯಲ್ಲಿ ವೇದವಿದೇವ ಚಾಹಮ್ ನಾನು ವೇದವನ್ನು ತಿಳಿಸಿದ್ದೇನೆ. ಹೊರತು ರಚನೆ ಮಾಡಿಲ್ಲ, ಎಂದು ಶ್ರೀಕೃಷ್ಣನೇ ಹೇಳಿದ್ದಾನೆ.

ಇಂತಹ ವೇದವು ಸಂಹಿತೆ, ಬ್ರಾಹ್ಮಣ, ಆರಣ್ಯಕ ಉಪನಿಷತ್ತೆಂದು ವಿಭಕ್ತವಾಗಿದೆ. ಇವುಗಳಲ್ಲಿ ಉಪನಿಷತ್ತು ರಹಸ್ಯ ವಿದ್ಯೆ ಎನಿಸಿದೆ. ಇವುಗಳಲ್ಲಿ ಭಗವಂತನ ತತ್ವಗಳು ತುಂಬಿರುತ್ತವೆ.

ಈ ಉಪನಿಷತ್ತುಗಳು ನೂರೆಂಟು ಇದ್ದರೂ ಪ್ರಧಾನವಾದವುಗಳು ಹತ್ತು. ಇವು ದಶೋಪನಿಷತ್ತುಗಳೆನಿಸಿವೆ. ಈಶ–ಕೇನ–ಕಠ–ಪ್ರಶ್ನ–ಮುಂಡಕ–ಮಾಂಡೂಕ್ಯ–ತೈತ್ತರೀಯ–ಐತ್ತರೇಯ–ಛಾಂದೋಗ್ಯ–ಬೃಹದಾರಣ್ಯಕ ಇವುಗಳಲ್ಲಿ ಐತರೇಯ ಋಗ್ವೇದಕ್ಕೆ ಸೇರಿದ್ದಾದರೆ, ತೈತ್ತರೀಯ ಯಜುರ್ವೇದಕ್ಕೂ, ಬೃಹದಾರಣ್ಯಕವವು ಶುಕ್ಲಯಜುರ್ವೇದಕ್ಕೂ, ಛಾಂದೋಗ್ಯ ಸಾಮವೇದಕ್ಕೂ, ಮುಂಡಕ, ಮಾಂಡೂಕ್ಯ, ಪ್ರಶ್ನ ಉಪನಿಷತ್ತುಗಳು ಅಥರ್ವವೇದಕ್ಕೆ ಸೇರಿದ್ದಾಗಿವೆ.

ಮಂಡೂಕರೂಪಿ ವರುಣನಿಂದ ಸ್ತುತಿಸಲ್ಪಟ್ಟ ನಾರಾಯಣನ ಸ್ತೋತ್ರವೇ ಮಾಂಡೂಕೋಪನಿಷತ್. ಜಾಗ್ರದಾದಿ ಅವಸ್ಥಾ ಪ್ರೇರಕಗಳಾದ ವಿಶ್ವ–ತೈಜಸ–ಪ್ರಾಜ್ಞ–ತುರೀಯಾದಿ ಭಗವದ್ರೂಪಗಳ ಸ್ತುತಿಗಳಿವೆ. ಓಂಕಾರದಿಂದ ಸ್ತುತಿಯನ್ನು ಮಾಡಲಾಗಿದ್ದು ಓಂ ಎಂಬುದು ಭಗವನ್ನಾಮವೇ ಆಗಿದೆ. ಪ್ರಕೃತ ಉಪನಿಷತ್ತು ಓಂಕಾರವು ಹೇಗೆ ಭಗವಂತನನ್ನು ಕೊಂಡಾಡುತ್ತದೆ ಎಂದು ತಿಳಿಸುತ್ತದೆ. ಓಂಕಾರವು ಸಕಲವೇದಗಳಿಗೂ ಮೂಲವಾಗಿವೆ. ಈ ಓಂಕಾರದ ವ್ಯಾಖ್ಯಾನವೇ ವ್ಯಾಹೃತಿ–ಗಾಯತ್ರೀ, ಗಾಯತ್ರಿಯ ವ್ಯಾಖ್ಯಾನವೇ ಪುರುಷಸೂಕ್ತ, ಇದರ ವ್ಯಾಖ್ಯಾನವೇ ಸಮಸ್ತವೇದಗಳು.

ಈ ಓಂಕಾರವು ಅ, ಉ, ಮಗಳಿಂದ ಕೂಡಿದ್ದು, ಅಕಾರ–ಉಕಾರ–ಮಕಾರ–ನಾದ–ಬಿಂದು–ಘೋಷ–ಶಾಂತ–ಅತಿಶಾಂತಗಳೆಂಬ ಅಷ್ಟಾಕ್ಷರಗಳಿಂದ ಕೂಡಿದ್ದು ಕ್ರಮವಾಗಿ ವಿಶ್ವ–ತೈಜಸ–ಪ್ರಾಜ್ಞ–ತುರೀಯ–ಆತ್ಮ–ಅಂತರಾತ್ಮ–ಜ್ಞಾನಾತ್ಮ–ಪರಮಾತ್ಮರ ಪ್ರತಿಪಾದ್ಯಗಳಾಗಿವೆ. ಸಮಸ್ತ ಜೀವರ ಜಾಗ್ರದಾದಿ ಅವಸ್ಥಾ ನಿಯಾಮಕಗಳಾದ ವಿಶ್ವಾದಿಗಳು ಮೋಕ್ಷ

ನಿಯಾಮಕವಾದ ತುರೀಯನ ಮಹಿಮೆಯನ್ನು ಈ ಉಪನಿಷತ್ತು ಕೊಂಡಾಡಿವೆ. ಪರಿಮಳಾಚಾರ್ಯರೆಂದೆ ಪ್ರಸಿದ್ಧರಾದ ರಾಘವೇಂದ್ರ ತೀರ್ಥರು ಭಾರತದಾದ್ಯಂತ ಗ್ರಂಥಕರ್ತೃಗಳೂ, ಮಹಿಮೆಗಳನ್ನು ತೋರಿದವರೂ, ಭಕ್ತರ ಅಭೀಷ್ಟಗಳನ್ನು ಇಂದಿಗೂ ನೀಡುತ್ತಿರುವವರೂ ಆಗಿದ್ದು ಸರ್ವ ಆಸ್ತಿಕ ಜನ ವೃಂದದಿಂದ ಮಾನ್ಯರಾಗಿದ್ದಾರೆ. ಇವರ ಪರಿಮಳಾದಿ ಗ್ರಂಥಗಳೆಲ್ಲವೂ ಸರಳ ಸಂಬೋದವಾಗಿದ್ದು ಪಂಡಿತ ಹಾಗೂ ವಿದ್ಯಾರ್ಥಿಗಳಿಗೂ ಅತ್ಯುಪಯುಕ್ತವಾಗಿವೆ. ಇವರ ಉಪನಿಷತ್ತುಗಳ ಖಂಡಾರ್ಥಗಳು ಅತ್ಯುಪಯುಕ್ತವಾಗಿದ್ದು ಇವರ ಸರ್ವಶಾಸ್ತ್ರ ಪಾಂಡಿತ್ಯಕ್ಕೆ ಕನ್ನಡಿ ಹಿಡಿದಂತಾಗಿದೆ.

**ಭಾಷ್ಯಮಂಗಳ :**

**ಪೂರ್ಣಾನಂದಜ್ಞಾನಶಕ್ತಿಸ್ವರೂಪಂ ನಿತ್ಯಮವ್ಯಯಮ್ ।**
**ಚತುರ್ಧಾ ಸರ್ವಭೋಕ್ತಾರಂ ವಂದೇ ವಿಷ್ಣುಂ ಪರಂ ಪದಮ್ ॥**

**ಅನುವಾದ :** ಪರಿಪೂರ್ಣವಾದ ಆನಂದ, ಜ್ಞಾನ ಹಾಗೂ ಶಕ್ತಿಯೇ ಸ್ವರೂಪವಾಗಿ ಉಳ್ಳವನೂ, ನಾಶರಹಿತನೂ, ನಿರ್ವಿಕಾರನೂ, ಪ್ರತಿಯೊಬ್ಬರ ದೇಹದಲ್ಲಿ ವಿಶ್ವಾದಿ ನಾಲ್ಕು ರೂಪಗಳಿಂದ ಬಾಹ್ಯ ಮತ್ತು ಆಂತರಿಕ ಪದಾರ್ಥಗಳ ಸಾರಭೋಕ್ತನೂ ಆಗಿರುವ ಸರ್ವೋತ್ಕೃಷ್ಟನೂ, ಸರ್ವಾಶ್ರಯನೂ ಆದ ವಿಷ್ಣುವನ್ನು ನಮಿಸುವೆನು ಎಂದು ಶ್ರೀಮದಾ-ಚಾರ್ಯರು ತಮ್ಮ ಈ ಉಪನಿಷದ್ಭಾಷ್ಯಕ್ಕೆ ಮಂಗಳಾಚರಣಶ್ಲೋಕ ಮಾಡಿದ್ದಾರೆ.

### ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

## ಮಾಂಡೂಕೋಪನಿಷತ್ ಖಂಡಾರ್ಥಃ

**ಸಮಸ್ತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ವಿಶ್ವಾದಿ ಚತುರಾತ್ಮನೇ ॥**

ಸಮಸ್ತ ಗುಣಪೂರ್ಣನೂ, ಸಕಲ ದೋಷದೂರನೂ ವಿಶ್ವಾದಿ ಚತೂರೂಪನೂ, ಮುಖ್ಯಪ್ರಾಣನಿಗೂ ನಾಥ-ನಾಗಿರುವ ವಿಷ್ಣುವಿಗೆ ನಮಸ್ಕಾರವು.

**ಅಸ್ಯಾಃ ಉಪನಿಷದಃ ಮಂಡೂಕರೂಪೀ ವರುಣಃ ಋಷಿಃ ಚತೂರೂಪೀ ಹರಿಃ ದೇವತಾ ॥ ಕೇಷಾಂಚಿತ್ ಛಂದೋಬದ್ಧಾನಾಂ ಅಕ್ಷರಗಣನಯಾ ಅನುಷ್ಟುಪ್ ಛಂದಸ್ತ್ವಂ ಜ್ಞೇಯಮ್ ।**

ಈ ಉಪನಿಷತ್ತಿಗೆ ಮಂಡೂಕರೂಪೀ ವರುಣನೇ ಋಷಿ. ವಿಶ್ವಾದಿ ಚತೂರೂಪೀ ಭಗವಂತನ ದೇವತೆ । ಛಂದೋಬದ್ಧ ಕೆಲವು ಶ್ಲೋಕಗಳು ಅನುಷ್ಟುಪ್ ಛಂದಸ್ಸಿನಲ್ಲಿವೆ. ಉಳಿದವು ಗದ್ಯ ಭಾಗವಾಗಿವೆ.

**ಮುಮುಕ್ಷೋಃ ಅಧಿಕಾರಿಣೋ ಅಖಿಲಕ್ಲೇಶನಿವೃತ್ತಿವಿಶಿಷ್ಟಪರಮಾನಂದವಾಪ್ತಯೇ ಸಮಸ್ತವ್ಯಸ್ತ-ಪ್ರಣವಪ್ರತಿಪಾದ್ಯ ಭಗವದುಪಾಸನಾಂ ವಕ್ತುಂ ಪ್ರವೃತ್ತೇಯಮುನಿಷತ್ । ಆದೌ ಸಮಸ್ತಪ್ರಣವಪ್ರತಿ-ಪಾದ್ಯಂ ತಾವದಾಹ- ಓಮಿತ್ಯಾದಿನಾ ಅಯಮಾತ್ಮಾ ಬ್ರಹ್ಮ ಇತ್ಯಂತೇನ ।**

ನಾನಾ ವಿಧ ಸಾಂಸಾರಿಕ ಪರಿಕ್ಲೇಶದಿಂದ ಬೆಂದು ಬಸವಳಿದ ಸಜ್ಜನರ ದುಃಖವನ್ನು ಪರಿಹರಿಸಿ ನಿರಂತರಾನಂದ ಸಂದೋಹವನ್ನು ಉಣಿಸಲು, ವ್ಯಸ್ತ- ಸಮಸ್ತ – ಪ್ರಣವ ಪ್ರತಿಪಾದ್ಯನಾದ ಭಗವಂತನ ಉಪಾಸನೆ ಮಾಡಿರೆಂದು ತಿಳಿಸಲು ಈ ಉಪನಿಷತ್ತು ಪ್ರವೃತ್ತವಾಗಿದೆ.

ಆದಿಯಲ್ಲಿ ಸಮಸ್ತ ವೇದಗಳ ಮೂಲವೆನಿಸಿದ ಓಂಕಾರದಿಂದ ಭಗವಂತನ ಉಪಾಸನೆಯನ್ನು ಮಾಡುವ ರೀತಿಯನ್ನು ಓಂ – ಅಯಮಾತ್ಮಾ ಬ್ರಹ್ಮ ಎಂಬಲ್ಲಿವರೆಗೆ ಹೇಳಿದ್ದಾರೆ.

**ಉಪನಿಷತ್**

**ಓಮಿತ್ಯೇತದಕ್ಷರಮಿದಂ ಸರ್ವಮ್ ।**
**ತಸ್ಯೋಪವ್ಯಾಖ್ಯಾನಂ ಭೂತಂ ಭವದ್ ಭವಿಷ್ಯದಿತಿ ॥ 1 ॥**

ಓಂಕಾರ ನಾಯಕ ಬ್ರಹ್ಮನಿಗೆ ಅಕ್ಷರ ಎಂದೂ, ಸರ್ವ ಎಂದೂ ಹೆಸರು. ಈ ಜಗತ್ತೆಲ್ಲವೂ ಇವನಲ್ಲಿ ಓತಪ್ರೋತ-ವಾಗಿದೆ. ಇವನು ನಾಶರಹಿತನಾದ್ದರಿಂದ ಅಕ್ಷರನೆಂದೂ, ಸಮಸ್ತ ಗುಣಪೂರ್ಣನಾದ್ದರಿಂದ ಸರ್ವನೆಂದೂ ಕರೆಯ-ಲ್ಪಟ್ಟಿರುವನು. ಭೂತ ಭವಿಷ್ಯದ್ವರ್ತಮಾನಗಳಲ್ಲಿ ವಿಕಾರವಿಲ್ಲದೆ ಶಶ್ವದೇಕಪ್ರಕಾರನಾಗಿರುವನು.

**ಏತದಿತಿ । ಶ್ರವಣಾದ್ಯದಿತ್ಯನ್ವೇತಿ । ಓಮಿತಿ, ಉಕ್ತಮಿತಿ ಶೇಷಃ । ಓತಂ ಜಗದಸ್ಮಿನ್ನಿತಿ ವ್ಯುತ್ಪತ್ತ್ಯಾ ಓಮಿತ್ಯುಕ್ತಂ ಯದ್ ಬ್ರಹ್ಮ ಏತದಕ್ಷರಮುಚ್ಯತೇ । ಇದಮಕ್ಷರಂ ಸರ್ವಂ ಗುಣಪೂರ್ಣಮ್ । ಕೇನ ನಿಮಿತ್ತೇನ ಓಂಕಾರವಾಚ್ಯಂ ಬ್ರಹ್ಮ ಅಕ್ಷರಮಿತ್ಯುಚ್ಯತ ಇತ್ಯತೋ ನ ಕ್ಷರತಿ ಕಾಲತ್ರಯೇಽಪೀತಿ ವ್ಯುತ್ಪತ್ತ್ಯಾ ಕಾಲತ್ರಯೇಽಪ್ಯೇಕಪ್ರಕಾರತಯಾ ನಿತ್ಯತ್ವಹೇತುನೇತಿ ಭಾವೇನ ಪ್ರತಿಜ್ಞಾಪೂರ್ವಕಂ ಪ್ರವೃತ್ತಿನಿಮಿತ್ತ-ಮಾಹ- ತಸ್ಯೇತಿ । ವಿಶಿಷ್ಯ ಆಖ್ಯಾಯತೇ ಅನೇನೇತಿ ವ್ಯಾಖ್ಯಾನಂ, ಪ್ರವೃತ್ತಿನಿಮಿತ್ತಮ್ । ತಸ್ಯ ಓಮಿತ್ಯಕ್ಷರಪ್ರತಿಪಾದ್ಯಸ್ಯ ಅಕ್ಷರಶಬ್ದಾರ್ಥತ್ವೇ ಉಪಪನ್ನಂ ವ್ಯಾಖ್ಯಾನಮುಚ್ಯತ ಇತ್ಯರ್ಥಃ । ತತ್ಕಿಮಿತ್ಯತ ಆಹ- ಭೂತಮಿತಿ । ಓಮಿತ್ಯುಕ್ತಂ ಬ್ರಹ್ಮ, ಭೂತಂ ಅತೀತಕಾಲೇ ವಿದ್ಯಮಾನಂ, ಭವದ್ವರ್ತಮಾನಕಾಲೇ ಸತ್, ಭವಿಷ್ಯತ್ ಆಗಾಮಿಕಾಲೇಽಪಿ ಸತ್, ಶಶ್ವದೇಕಪ್ರಕಾರಮಿತಿ ಯಾವತ್ । ಅತೋಽಕ್ಷರಮುಚ್ಯತ ಇತ್ಯರ್ಥಃ । ಇತಿಶಬ್ದಸ್ಯೋಪವ್ಯಾಖ್ಯಾನಮಿತಿ ಪೂರ್ವೇಣಾನ್ವಯಃ ॥ 1 ॥**

ಯತ್ – ಯಾವ ಬ್ರಹ್ಮನಲ್ಲಿ, ಜಗತ್ತೆಲ್ಲವೂ ಓತಪ್ರೋತವಾಗಿರುವ ನಿಮಿತ್ತದಿಂದ ಓಂ ಎಂದು ಹೇಳಲಾಗಿದೆಯೋ, ಆ ಬ್ರಹ್ಮನು ತ್ರಿಕಾಲದಲ್ಲಿಯೂ ನಾಶರಹಿತ ಅಕ್ಷರನೆಂದು, ಸರ್ವಂ – ಗುಣ– ಪೂರ್ಣನೆಂದೂ ಹೇಳಲ್ಪಡುತ್ತಾನೆ.

ನ ಕ್ಷರತೀ ಕಾಲತ್ರಯೋಽಪಿ ಎಂಬಂತೆ ಮೂರು ಕಾಲಗಳಲ್ಲಿಯೂ ನಾಶವಾಗದೇ ಶಶ್ವದೇಕಪ್ರಕಾರನಾದ್ದರಿಂದ ಅಕ್ಷರನೆನಿಸಿದ್ದಾನೆ. ಓಂ ಎಂಬ ಅಕ್ಷರವನ್ನು ಪ್ರತಿಪಾದಿಸುವ ಪ್ರವೃತ್ತಿನಿಮಿತ್ತವನ್ನು ಉಪನಿಷತ್ತು – ಭೂತಂ ಭವದ್ ಭವಿಷ್ಯತ್ ಎಂದು ಹೇಳುತ್ತದೆ.

**ಯದಕ್ಷರಸ್ಯ ಸರ್ವಮಿತ್ಯನೇನ ಪೂರ್ಣತ್ವಮುಕ್ತಂ ತದನ್ಯಸ್ಯಾಪ್ಯಸ್ತಿ ಕಿಮಿತ್ಯತೋ ನೇತ್ಯಾಹ-- ಸರ್ವಮಿತಿ ।**

**ಸರ್ವಮೋಂಕಾರ ಏವ ।**
**ಯಚ್ಚಾನ್ಯತ್ ತ್ರಿಕಾಲಾತೀತಂ ತದಪ್ಯೋಂಕಾರ ಏವ ।**
**ಸರ್ವಂ ಹ್ಯೇತತ್ ಬ್ರಹ್ಮ । ಅಯಮಾತ್ಮಾ ಬ್ರಹ್ಮ ॥ 2 ॥**

**ಓಮಿತ್ಯಾಕ್ರಿಯತೇ ಪ್ರತಿಪಾದ್ಯತ ಇತಿ ಓಂಕಾರಃ । ಕೃಞಃ ಕರ್ಮಣಿ ಘಞ್‌ಪ್ರತ್ಯಯಃ, ಅಚೋ ಞ್ಣಿತೀತಿ ವೃದ್ಧಿಃ, ಘಞಬಂತಃ ಪುಂಸೀತಿ ಪುಲ್ಲಿಂಗತಾ । ಓಮಿತ್ಯುಚ್ಯಮಾನಂ ಅಕ್ಷರಮೇವ ಸರ್ವಂ, ಪೂರ್ಣಂ ನ ತ್ವನ್ಯಾದಿತ್ಯರ್ಥಃ । ಭೂತಮಿತ್ಯಾದಿನೋಕ್ತಂ ಶಶ್ವದೇಕಪ್ರಕಾರತ್ವರೂಪಕಾಲತ್ರಯಾತೀತತ್ವ-ಮಕ್ಷರಪದಪ್ರವೃತ್ತಿಮಪಿ ನಾನ್ಯಸ್ಯೇತ್ಯಾಹ- ಯಚ್ಚಾನ್ಯದಿತಿ । ಕಾಲತ್ರಯಕೃತವಿಕಾರಹೀನರೂಪಂ ತ್ರಿಕಾಲಾತೀತಂ ಚ ಯತ್ ಸ್ಯಾತ್ ಚಿತ್ಪ್ರಕೃತಿರೂಪಮಸ್ತಿ ತದಪ್ಯೋಂಕಾರ ಏವ । ಓಮಿತ್ಯುಚ್ಯಮುನಾ-ಕ್ಷರಾರ್ಥಂ ಬ್ರಹ್ಮೈವ । ನ ತಯೋಽನ್ಯತ್ ತಾದೃಶಮಸ್ತೀತ್ಯರ್ಥಃ । ಶ್ರೀತತ್ತ್ವೇ ಶಶ್ವದೇಕಪ್ರಕಾರತ್ವರೂಪಂ ಕಾಲತ್ರಯಾತೀತತ್ವಮೀಶಪ್ರಸಾದಾಯತ್ತಂ ನ ಸ್ವತ ಇತಿ ಭಾವಃ । ಯದ್ವಾ ಯತ್ ಕಾಲತ್ರಯಾತೀತಂ ತದಪ್ಯೋಂಕಾರ ಏವ । ಅನ್ಯಚ್ಚ ಶ್ರೀತತ್ವಂ ಚ । ತದುಭಯಾನ್ಯತ್‌ಕಾಲತ್ರಯಾತೀತಂ ನೇತ್ಯೇವ-ಕಾರಾರ್ಥಃ ।**

ಭಗವಂತನು ಓಂ ಎಂದು ಕರೆಸಿಕೊಳ್ಳುವನಾದ್ದರಿಂದ ಓಂಕಾರವೆಂದು ಹೇಳಲ್ಪಡುವನು. ಹೀಗೆ ಓಂ ಎಂದು ಕರೆಯಲ್ಪಡುವ ಅಕ್ಷರನಾಮಕ ಭಗವಂತನು ಸರ್ವನು, ಎಂದರೆ ಪೂರ್ಣನು. ಬೇರೆ ಯಾವದೂ ಅಲ್ಲ. ಅಷ್ಟೇ ಅಲ್ಲ ಭೂತಂ ಭವ್ಯಂ ಇತ್ಯಾದಿಗಳಿಂದ ಹೇಳಿದ ಶಶ್ವದೇಕಪ್ರಕಾರರೂಪ ಕಾಲತ್ರಯಾತೀತತ್ವವೂ ಸಹ ಭಗವಂತನಿಗೆ ಎಂದೇ ಯಚ್ಚಾನ್ಯತ್ ಇತ್ಯಾದಿ ಹೇಳುವರು.

ಕಾಲತ್ರಯ ಪ್ರಯುಕ್ತ ವಿಕಾರಶೂನ್ಯತ್ವವು ಚಿತ್ಪ್ರಕೃತಿಗೂ ಇರುತ್ತದೆ. ಆದರೂ ಚಿತ್ ಪ್ರಕೃತಿಯು ಭಗವಂತನಿಗಿಂತ ಭಿನ್ನಳಾಗಿದ್ದು (ಅನ್ಯತ್) ಕಾಲತ್ರಯ ವಿಕಾರ ರಹಿತಳಾಗಿರುವುದು ಸ್ವತಂತ್ರವಾಗಿಯಲ್ಲ. ಓಂಕಾರ ವಾಚ್ಯನಾದ ಭಗವಂತನ ಅನುಗ್ರಹದಿಂದ.

'ಓಂ'ಪದವಾಚ್ಯನಾದ ಬ್ರಹ್ಮನು ಪೂರ್ಣನೆಂದು ಹೇಳಲಾಯಿತು. ಅವನಿಗೆ ಮಾತ್ರ ಪೂರ್ಣತ್ವ ಹೇಗೆ ? – ಎಂಬ ಪ್ರಶ್ನೆಗೆ ಉತ್ತರವಾಗಿ – **ಯಚ್ಚಾನ್ಯತ್** ಎಂದು ಉತ್ತರಿಸಿದ್ದಾರೆ.

ಕಾಲತ್ರಯ ಕೃತವಿಕಾರರಾಹಿತ್ಯರೂಪ ತ್ರಿಕಾಲಾತೀತತ್ವವಾದರೂ, ಚೇತನ ಪ್ರಕೃತಿಗೂ ಇದೆ. ಆದರೆ ಚಿತ್ಪ್ರಕೃತಿಯು ಭಗವಂತನಿಂದ ಭಿನ್ನವಾಗಿದ್ದು ಅವನ ಅಧೀನವಾಗಿದೆ.

ಅಥವಾ ಕಾಲತ್ರಯ ಪ್ರಯುಕ್ತ ವಿಕಾರಶೂನ್ಯನು, ಶ್ರೀಹರಿಯೆ, ಮತ್ತೊಂದು ಕಾಲತ್ರಯ ವಿಕಾರರಹಿತಳೆಂದರೆ ಚಿತ್ಪ್ರಕೃತಿಯು. ಇವೆರಡನ್ನು ಬಿಟ್ಟು ಇತರ ಯಾವುದೇ ತತ್ವ ಕಾಲತ್ರಯ ವಿಕಾರ ರಹಿತವಾದದ್ದಲ್ಲ.

**ಸರ್ವಮೋಂಕಾರ ಏವೇತ್ಯತ್ರ ಓಂಪದವಾಚ್ಯಬ್ರಹ್ಮಣಃ ಪೂರ್ಣತ್ವಮುಕ್ತಮ್ । ತತ್ ಕುತ ಇತ್ಯಾಶಂಕಾಂ ಪ್ರಮಾಣಸೂಚನೇನ ನಿರಾಹ - ಸರ್ವಂ ಹ್ಯೇತದ್ ಬ್ರಹ್ಮೇತಿ ।**

ಸರ್ವಂ ಹ್ಯೇತದ್ ಎಂದು ಓಂಕಾರ ವಾಚ್ಯ ತತ್ವವು ಪೂರ್ಣವೆಂದು ತಿಳಿಸಲಾಯಿತು. ಅದು ಹೇಗೆಂಬ ಶಂಕೆಯನ್ನು ಪ್ರಮಾಣ ಮೂಲಕ ಪರಿಹರಿಸುತ್ತಾರೆ – ಸರ್ವಂಹ್ಯೇತದ್‌ಬ್ರಹ್ಮ ಎಂದು.

**ಏತದೋಂಪದವಾಚ್ಯಮಕ್ಷರಾಖ್ಯಂ ಬ್ರಹ್ಮ - ಸರ್ವಂ ಪೂರ್ಣಂ ಹಿ, 'ಪರಮಂ ಯೋ ಮಹದ್ ಬ್ರಹ್ಮ', 'ತದೇವ ಬ್ರಹ್ಮ ಪರಮಂ ಕವೀನಾಂ', 'ಪೂರ್ಣಮದಃ ಪೂರ್ಣಮಿದಂ' ಇತ್ಯಾದಿಷು ಪ್ರಸಿದ್ಧ-ಮಿತ್ಯರ್ಥಃ ।**

ಈ ಓಂಕಾರವಾಚ್ಯನಾದ, ಅಕ್ಷರನಾಮಕ ಬ್ರಹ್ಮನು ಸರ್ವನು ಅಂದರೆ ಪೂರ್ಣನಾಗಿರುವನು. ಇದಕ್ಕೆ ಪ್ರಮಾಣ-ಪರಮಂ ಯೋ ಮಹದ್ಬ್ರಹ್ಮ - ತದೇವ ಬ್ರಹ್ಮ ಪರಮಂ ಕವೀನಾಂ - ಪೂರ್ಣಮದಃ ಪೂರ್ಣಮಿದಂ ಇತ್ಯಾದಿ ಶೃತಿಗಳು ಪ್ರಮಾಣಗಳಾಗಿವೆ.

**ನನು ಜೀವಾನಾಂ ಹಿತಾಹಿತಕ್ರಿಯಾಸು ಅಸ್ವಾತಂತ್ರ್ಯಾನುಭವೇನ ತೇಷ್ವಪಿ ಕಶ್ಚಿದಸ್ತಿ ನಿಯಂತೇ-ತ್ಯನುಮಿತಸ್ಯಾಪಿ ಗುಣಪೂರ್ತ್ಯಾದೇಃ ಅಪೇಕ್ಷಣೀಯತ್ವಾತ್ ಕಥಂ ಓಂಪದವಾಚ್ಯಸ್ಯೈವ ಪೂರ್ಣತ್ವಾತ್ ಇತ್ಯತೋಽಯಮೇವ ತತ್ರಾಪಿ ನಿಯಂತಾ ನಾನ್ಯ ಇತ್ಯಾಹ - ಅಯಮಿತಿ । ಶ್ರೀಬ್ರಹ್ಮಾದಿಷ್ವಾದಾ-ನಾದಿಕರ್ತೃತಯಾ ಸ್ಥಿತೋ ಯ ಆತ್ಮಾ ಅಯಂ ಬ್ರಹ್ಮ ಪ್ರಾಗುಕ್ತಂ ಓಂಪದವಾಚ್ಯಂ ಪ್ರಹ್ಮೈವ, ನ ತ್ವನ್ಯಃ ಕಶ್ಚಿದಿತ್ಯರ್ಥಃ । ಯೇನ ತಸ್ಯೈವ ಪೂರ್ಣತ್ವಾದೀತ್ಯೇತನ್ನ ಸ್ಯಾದಿತಿ ಭಾವಃ ॥ 2 ॥**

ಇದರ ಮೇಲೆ ಇನ್ನೊಂದು ಆಶಂಕೆ - ಜೀವರಿಗೆ ತಮಗೆ ಹಿತವನ್ನೇ ಮಾಡಿಕೊಳ್ಳುವುದರಲ್ಲಾಗಲೀ, ಅಹಿತವನ್ನು ಮಾಡಿಕೊಳ್ಳುವುದರಲ್ಲಾಗಲೀ ಸ್ವಾತಂತ್ರ್ಯವಿರುವುದಿಲ್ಲ. ಹೀಗಾಗಿ ಅವರಲ್ಲಿಯೂ ಒಬ್ಬ ನಿಯಾಮಕನನ್ನು ಒಪ್ಪಬೇಕಾ-ಗುತ್ತದೆ. ಹೀಗೆ ಒಪ್ಪಿ ಸಿದ್ಧವಾಗುವ ಆ ನಿಯಾಮಕನು ಗುಣಪೂರ್ಣನಾಗಿರಲೇಬೇಕಾಗುತ್ತದೆ. ಹೀಗಿರುವಾಗ ಓಂಕಾರ ವಾಚ್ಯ ಪರಬ್ರಹ್ಮನು ಮಾತ್ರವೇ ಪೂರ್ಣನೆಂದು ಹೇಳಿದ್ದು ಹೇಗೆ ಕೂಡುತ್ತದೆ ? ಎಂಬ ಆಶಂಕೆಗೆ - ಅಯಮಾತ್ಮಾಬ್ರಹ್ಮ ಎನ್ನಲಾಗಿದೆ. ಇದರರ್ಥ ಓಂಕಾರಪದ ವಾಚ್ಯನಾದ ಪರಬ್ರಹ್ಮನೇ ಬ್ರಹ್ಮಾದಿ ಜೀವರಲ್ಲಿ ಸ್ಥಿತನಾಗಿ ಸಮಸ್ತ ವ್ಯಾಪಾರ ಮಾಡುವವನು ಎಂದು.

**ವಿಶೇಷಾಂಶ :** ಚಿತ್ಪ್ರಕೃತಿಯು ತ್ರಿಕಾಲವಿಕಾರರಹಿತಳಾಗಿದ್ದು ಅಕ್ಷರ ಶಬ್ದ ವಾಚ್ಯಳಾಗಿರುವಳು. ಗೀತೆಯು 'ಕೂಟಸ್ಥೋಽಕ್ಷರ ಉಚ್ಯತೆ' ಎಂದಿದೆ. ಹಾಗಿದ್ದರೂ ಅಕ್ಷರ ಪದದ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಪೂರ್ಣವಾಗಿರು-ವುದರಿಂದ ಸ್ವತಂತ್ರನಾದ್ದರಿಂದಲೂ ಪರಮ ಮುಖ್ಯವೃತ್ತಿಯಿಂದ ಉತ್ತಮ ಅಕ್ಷರ ಪ್ರತಿಪಾದ್ಯನು. ಲಕ್ಷ್ಮೀದೇವಿಯಾದರೂ ಮುಖ್ಯವೃತ್ತಿಯಿಂದ ಭಗವದಧೀನಳಾಗಿ, ಅಕ್ಷರಶಬ್ದ ವಾಚ್ಯಳಾಗಿದ್ದು ಮಧ್ಯಮಾಕ್ಷರವೆನಿಸಿರುವಳು.

ತ್ರಿಕಾಲಾತೀತತ್ವವು ಬ್ರಹ್ಮ, ಚಿತ್ ಪ್ರಕೃತಿಯಲ್ಲದೆ ನಿತ್ಯಗಳಾದ ಕಾಲ, ಅವ್ಯಾಕೃತಕಾಶ, ವೇದಗಳಿಗೂ ಇದೆಯಾದರೂ ಚಿತ್ಪ್ರಕೃತಿಯಿಂದ ಅಭಿಮನ್ಯವಾದ್ದರಿಂದ ಆ ತತ್ವಗಳನ್ನು ಸಂಗ್ರಹಿಸಿದಂತಾಗಿದೆ.

ಮುಕ್ತರಿಗಾದರೂ ಶಶ್ವದೇಕ ಪ್ರಕಾರತ್ವ ಉಂಟು. ಅಂದರೆ ರೂಪವಿಕಾರರಹಿತರೇ ಆಗಿರುವರು. ಆದರೆ ಸಂಸಾರಾ-ವಸ್ಥೆಯಲ್ಲಿ ಕಾಲಕೃತವಾದ ವಿಕಾರ ಹೊಂದಿದವರೆ ಆಗಿರುವರು.

**ಭಾಷ್ಯ - ಪೂರ್ಣಸ್ತು ಹರಿರೇವೈಕೋ ನಾನ್ಯತ್ ಪೂರ್ಣಂ ಕದಾಚನ ।**
**ವಿನಾ ಚ ಪ್ರಕೃತಿಂ ನಾನ್ಯತ್ ಕಾಲಾತೀತಂ ಪರಾತ್ಮನಃ ॥**

**ಕಾಲಶ್ಚೈವ ದಿಶೋ ವೇದಾ ಪ್ರಕೃತ್ಯಾತ್ಮಾನ ಈರಿತಾಃ ।**
**ಅಭಿಮಾನಾತ್ತು ಜೀವಾನಾಂ ನ ಕಾಲಾತೀತತಾ ಭವೇತ್ ॥**

**ಮುಕ್ತಾನಾಮಪಿ ಪೂರ್ವತ್ರ ಕಾಲಸಂಬಂಧ ಈರಿತಃ ।**
**ಪೂರ್ಣತ್ವಂ ಚ ಸದಾ ವಿಷ್ಣೋಃ ಪ್ರಸಿದ್ಧಂ ಸರ್ವವೇದತಃ ॥**

**ಸೋಽಯಮಾತ್ಮಾ ಚತುಷ್ಪಾತ್ ।**
**ಜಾಗರಿತಸ್ಥಾನೋ ಬಹಿಃ ಪ್ರಜ್ಞಃ ।**
**ಸಪ್ತಾಂಗಃ ಏಕೋನವಿಂಶತಿಮುಖಃ ।**
**ಸ್ಥೂಲಭುಕ್ ವೈಶ್ವಾನರಃ ಪ್ರಥಮ ಪಾದಃ ॥ 3 ॥**

**ಏವಂ ಸಮಸ್ತಪ್ರಣವಪ್ರತಿಪಾದ್ಯಂ ಉಪಾಸನಾರ್ಥಂ ನಿರೂಪ್ಯ, ಇದಾನೀಂ ತದೇಕದೇಶ್ಯಃ ಅಕಾರೋಕಾರಮಕಾರನಾದ್ಯೈಃ ವಿಶ್ವಾದಿಪ್ರತಿಪಾದ್ಯಾನಾಂ ಭಗವದ್ರೂಪಾಣಾಂ ಉಪಾಸನಾಂ ಅಕಾ-ರೋಕಾರಮಕಾರ ಇತ್ಯಾದಿನಾ ತೃತೀಯಖಂಡೇ ವಕ್ತುಂ ತಾನಿ ರೂಪ್ಯಾಣ್ಯಾಹ - ಸೋಽಯಮಿತಿ ।**

ಹೀಗೆ ಸಮಸ್ತ ಪ್ರಣವ ಪ್ರತಿಪಾದಕನಾದ ಭಗವಂತನ ಉಪಾಸನೆಯನ್ನು ನಿರೂಪಿಸಿ, ಪ್ರಸ್ತುತ ಪ್ರಣವದ ಅಂಶಗಳಾದ ಆಕಾರ, ಉಕಾರ, ಮಕಾರ ನಾದ ಪ್ರತಿಪಾದ್ಯಗಳಾದ ವಿಶ್ವ-ತೈಜಸ - ಪ್ರಾಜ್ಞ - ತುರ್ಯ ರೂಪಗಳ ಉಪಾಸನಾ ಪ್ರಕಾರವನ್ನು ಹೇಳುತ್ತಾರೆ.

**ಸಃ ಸಮಸ್ತೋಂಕಾರವಾಚ್ಯೋಽಕ್ಷರನಾಮಾಽಯಂ ಶ್ರೀಬ್ರಹ್ಮಾದಿಷು ನಿಯಾಮಕತಯಾ ಸ್ಥಿತ ಆತ್ಮಾ ಚತುಷ್ಪಾತ್, ಚತ್ವಾರಃ ಪಾದಾಃ ಅಂಶಾಃ ಸ್ವರೂಪಭೂತಾಃ ಯಸ್ಯ ಸ ಚತುಷ್ಪಾತ್, ಪಾದಪದಸ್ಯ ಸಂಖ್ಯಾಸು ಪೂರ್ವಸ್ಯ ಇತಿ ಅಂತಲೋಪಃ । ಸರ್ವಜೀವನಿಯಾಮಕತಯಾ ತತ್ತದ್ದೇಹೇಷು ಚತೂ-ರೂಪತಯಾ ತಿಷ್ಠತೀತ್ಯರ್ಥಃ । ಕಾನಿ ತೇಷಾಂ ಸ್ಥಾನಾನಿ, ಕಶ್ಚ ವ್ಯಾಪಾರಃ, ಕೀದೃಶಾನಿ ತಾನಿ ರೂಪಾಣಿ, ಕಿಂ ತೇಷಾಂ ಭೋಗ್ಯಂ, ಕಾನಿ ನಾಮಾನೀತ್ಯತಃ ತತ್ಸರ್ವಂ ಪ್ರಮೇಣಾಹ - ಜಾಗರಿತೀತಿ ।**

ಯಾರು ರಮಾ-ಬ್ರಹ್ಮಾದಿಗಳ ನಿಯಾಮಕನಾಗಿಯೂ, ಓಂಕಾರವಾಚ್ಯನೂ, ಅಕ್ಷರನಾಯಕನೂ ಆಗಿರುವನೋ ಈ ಆತ್ಮನೇ - ಭಗವಂತನೇ ತನ್ನದೆ ಆದ ಸ್ವರೂಪಭೂತವಾದ ನಾಲ್ಕು ಅಂಶಗಳಿಂದ ಈ ದೇಹದಲ್ಲಿರುವನು. ಹಾಗಾದರೆ ಈ ಭಗವಂತನು ಈ ದೇಹದಲ್ಲಿ ಯಾವ ಭಾಗದಲ್ಲಿದ್ದಾನೆ ? ಅವನ ವ್ಯಾಪಾರಗಳೇನು ? ಅವನ ರೂಪವೇನು ? ಅವನು ಭೋಗಿಸಿದ ಭೋಗವೇನು ? ಅವನು ಯಾವ ಹೆಸರಿನಿಂದ ಕರೆಯಲ್ಪಡುತ್ತಾನೆ ? ಎಂಬ ವಿಷಯಗಳನ್ನು ಜಾಗರಿತ ಇತ್ಯಾದಿ ಭಾಗದಲ್ಲಿ ಕ್ರಮವಾಗಿ ನಿರೂಪಿಸುತ್ತಾರೆ.

**ಯತ್ರ ಸ್ಥಿತ್ವಾ ಜಾಗರ್ತಿ ತಚ್ಚಕ್ಷುರ್ಜಾಗರಿತಮ್ । ಅಧಿಕರಣೇ ಕ್ತಃಪ್ರತ್ಯಯಃ । ತದೇವ ಸ್ಥಾನಂ ಯಸ್ಯ ಸಃ । ಜಾಗರಿತಸ್ಥಾನಃ ಚಕ್ಷುಸ್ಥಾನ ಇತ್ಯರ್ಥಃ । ಬಹಿಃಪ್ರಜ್ಞಃ ಬಹಿಃಶಬ್ದೋ ಬಾಹ್ಯಾರ್ಥಪರಃ, ಬಹಿಃ ಬಾಹ್ಯಾರ್ಥಾನ್ ಪ್ರಜ್ಞಾಪಯತೀತಿ ಬಹಿಃಪ್ರಜ್ಞಃ । ಜಾನಾತೇಃ ಅಂತರ್ಣೀತಣ್ಯರ್ಥಾದ್ ಇಗುಪಧಜ್ಞಾಪ್ರೀಕಿರಃ ಕ ಇತಿ ಕಪ್ರತ್ಯಯಃ । ಆತೋಲೋಪ ಇಟ್ ಚೇತ್ಯಾಕಾರಲೋಪಃ ।**

ಜೀವಾತ್ಮನು ಬಲಗಣ್ಣಿನಲ್ಲಿ ಇರುವಾಗ ಜಾಗ್ರದವಸ್ಥೆಗೆ ಬರುವ ಕಾರಣ ಬಲಗಣ್ಣು ಜಾಗರಿತಸ್ಥಾನ ಎನಿಸಿದೆ. ಅಕರಣಾರ್ಥದಲ್ಲಿ ಕ್ತ ಪ್ರತ್ಯಯ. ಅಲ್ಲಿರುವವನೆ ಜಾಗರಿತಸ್ಥಾನನು. ಬಹಿಃ ಪ್ರಜ್ಞಃ ಎಂದರೆ ಬಾಹ್ಯ ಪದಾರ್ಥಗಳ ಜ್ಞಾನವನ್ನು

ಹುಟ್ಟಿಸುವವನು. ಬಹಿಃ ಬಾಹ್ಯಾರ್ಥಾನ್ ಪ್ರಜ್ಞಾಪಯತಿ ಎಂಬ ವ್ಯತ್ಪತ್ತಿಯಂತೆ ಅಂತರ್ಣೀತ ಣಿ ಚ್ - ಕ ಪ್ರತ್ಯಯ, ಆತೋಲೋಪ ಇಟ್ ಚ ಎಂಬ ಸೂತ್ರದಿಂದ ಪ್ರಜ್ಞಾ ಎಂಬಲ್ಲಿನ ಆಕಾರ ಲೋಪವಾಗಿ ಬಹಿಃಪ್ರಜ್ಞಃ ಎಂದಾಗಿದೆ.

**ಸಪ್ತಾಂಗಃ । ಚತ್ವಾರೋ ಹಸ್ತಾಃ । ದ್ವೌ ಪಾದೌ । ಗಜಮುಖತ್ವಾದ್ ಗಜಹಸ್ತ ಏಕ ಇತಿ ಸಪ್ತಾಂಗಃ । ಏಕೋನವಿಂಶತಿಮುಖಃ ನವೋತ್ತರದಶಮುಖಃ । ಮಧ್ಯಮಮುಖಂ ಗಜಮುಖಾಕಾರಂ, ಪಾರ್ಶ್ವದ್ವಯೇ ತು ನವ ನವ ಮುಖಾನಿ ಪುರುಷಮುಖಾಕಾರಾಣೀತಿ ವಿವೇಕಃ ।**

ಸಪ್ತಾಂಗ ಎಂದರೆ ಈ ವಿಶ್ವನಾಮಕನಿಗೆ ನಾಲ್ಕು ಕೈಗಳು, ಎರಡು ಪಾದಗಳು, ಒಂದು ಸೊಂಡಿಲು, ಹತ್ತೊಂಭತ್ತು ಮುಖವುಳ್ಳವನು. ಇವುಗಳಲ್ಲಿ ಎಡ-ಬಲಗಳಲ್ಲಿ ಒಂಭತ್ತು ಒಂಭತ್ತು ಪುರುಷಮುಖಗಳಿದ್ದು ಮಧ್ಯದಲ್ಲಿ ಆನೆಯಂತಹ ಮುಖವು.

**ಸ್ಥೂಲಭುಕ್, ಸ್ಥೂಲಾನ್ ಶುಭಭೋಗಾನ್ ಭುಂಕ್ತೇ ಇತಿ ಸ್ಥೂಲಭುಕ್ । ವೈಶ್ವಾನರಃ, ವಿಶ್ಯತೇ ಗಮ್ಯತೇ = ಸರ್ವೈಃ ಜ್ಞಾಯತೇ ಇತಿ ವಿಶತೇಃ ಕರ್ಮಣಿ ವಪ್ರತ್ಯಯಃ । ಅನೇಕಾರ್ಥತ್ವಾದ್ ಧಾತೂನಾಂ ವಿಶತಿರತ್ರ ಗತ್ಯರ್ಥಸ್ಸನ್ ಜ್ಞಾನಪರಃ । ವಿಶ್ವಂ ಸರ್ವೈಃ ಜ್ಞೇಯಂ ಸ್ಥೂಲಂ ವಸ್ತೂಚ್ಯತೇ । ಭೋಕ್ತೃತಯಾ ತತ್ಸಂಬಂಧೀ ವೈಶ್ವಃ । ನ ರೀಯತೆ ನ ಕ್ಷೀಯತೇ ಇತಿ ನರಃ । ರೀಙ್ ಕ್ಷಯೇ ಡ ಪ್ರತ್ಯಯಃ, ವೈಶ್ವಶ್ಚಾಸೌ ನರಶ್ಚ, ನರೇ ಚ ಸಂಜ್ಞಾಯಾಂ ಇತಿ ಸೂತ್ರೇಣ, ಭಾಷ್ಯೋಕ್ತನಿರುಕ್ತಿಬಲಾದ್ವಾ ದೀರ್ಘಃ ವೈಶ್ವಾನರಃ । ಪ್ರಥಮಃ ಪಾದಃ । ಆತ್ಮನ ಇತಿ ವಿಪರಿಣಾಮೇನಾತ್ರ, ಉತ್ತರತ್ರ ಚಾನುಷಂಗಃ । ಸರ್ವದೇಹೇ-ಷ್ವಾದಾನಾದಿಕರ್ತೃತ್ವೇನ ಸ್ಥಿತಸ್ಯಾಽಽತ್ಮನಃ ಪ್ರಥಮಂ ರೂಪಮಿತ್ಯರ್ಥಃ ।**

ಸ್ಥೂಲಭುಕ್ ಎಂದರೆ ವೈಶ್ವಾನರ ರೂಪದಿಂದ ಜೀವನು ಭೋಗಿಸುವ ಶುಭಾಶುಭ ವಿಷಯ ಪದಾರ್ಥಗಳನ್ನೆಲ್ಲ ಭೋಗಿಸುತ್ತಾನೆ ಎಂದರ್ಥವಲ್ಲ, ನಿಷಿದ್ಧವಲ್ಲದ ಶುಭವಾದ ಸಕಲ ವಿಷಯಕವಾದ ಪದಾರ್ಥಗಳನ್ನು ಭೋಗಿಸುತ್ತಾನೆ ಎಂದರ್ಥ.

ಧಾತುಗಳಿಗೆ ಅನೇಕಾರ್ಥಗಳಿರುವುದರಿಂದ ವಿಶ ಪ್ರವೇಶನೆ ಧಾತುವಿಗೆ ಜ್ಞಾನವೆಂದರ್ಥ. ಸರ್ವರಿಂದಲೂ ಭೋಗ್ಯವಾದ ಸತ್ಪದಾರ್ಥಗಳನ್ನು ಜೀವಾತ್ಮರ ಇಂದ್ರಿಯಗಳ ದ್ವಾರಾ ಭೋಗಿಸುವದರಿಂದ ಭಗವಂತನು ವೈಶ್ವ ಎನಿಸಿದ್ದಾನೆ. ಜೀವಾತ್ಮರ ಶರೀರದಲ್ಲಿದ್ದರೂ ನಾಶ ಹೊಂದದಿರುವ ಪ್ರಯುಕ್ತ ನರ ಎಂದೆನಿಸಿರುವನು. ವೈಶ್ವಶ್ಚಾಸೌ ನರಶ್ಚ ಎಂದು ಸಮಾಸ ಮಾಡಿದಾಗ ನರೇ ಸಂಜ್ಞಾಯಾಂ ಎಂಬ ಸೂತ್ರದಿಂದ ಅಥವಾ ನಿರ್ವಚನ ಬಲದಿಂದ ವೈಶ್ವಾನರ ಎಂದು ದೀರ್ಘ.

ಪ್ರಥಮಃ ಪಾದಃ - ಸರ್ವ ದೇಹಗಳಲ್ಲಿಯೂ ಇದು ಆದಾನಾದಿಕರ್ತನಾದ ಭಗವಂತನ ಮೊದಲನೆಯ ರೂಪ. (ಭಾಷ್ಯಃ ಚತುರ್ಧಾವಸ್ಥಿತೋ ದೇಹೇ ಪರಮಾತ್ಮ ವೈಶ್ವಾನರೇ ಜಾಗರಿತಸ್ಥಾನಗೋ ಗಜವಕ್ತ್ರನಿರ್ಮಾತಾ ಬಾಹ್ಯಸಂವಿತ್ತೇಃ ಜೀವಾನಾಂ ತದ್ ಅಷ್ಟಾದಶಮುಖಾನ್ಯಸ್ಯ ಪುಮಾಕಾರಾಣಿ ಸ ಮಧ್ಯಮಂ ತು ಗಜಾಕಾರಂ ಚತುರ್ಬಾಹುಃ ಪಾದೌ ಹಸ್ತಿ ಕರೋ ಹಸ್ತಾ ಇತಿ ಸಪ್ತಾಂಗ ಈರಿತಂ ವಿಶ್ವಂ ಸ್ಥೂಲಂ ಸಮುದ್ದಿಷ್ಟಂ ಸರ್ವಗಮ್ಯುತ್ವ ತತ್ಸಂಬಂಧೀ ನರೋನಾಶಾದ್ ವೈಶ್ವಾನರ ಉದಾಹೃತಃ)

**ಸ್ವಪ್ನಸ್ಥಾನೋಽಂತಃಪ್ರಜ್ಞಃ ಸಪ್ತಾಂಗ ಏಕೋನವಿಂಶಂತಿಮುಖಃ**
**ಪ್ರವಿವಿಕ್ತಭುಕ್ ತೈಜಸೋ ದ್ವಿತೀಯಃ ಪಾದಃ ॥ 4 ॥**

**ಸ್ವಪ್ನಸ್ಥಾನಃ - ಯತ್ರ ಸ್ಥಿತ್ವಾ ಜೀವಃ ಸ್ವಾಪ್ನಪದಾರ್ಥಾನ್ ಪಶ್ಯತಿ ಸ ಸ್ವಪ್ನಃ, ತದೇವ ಸ್ಥಾನಂ ಯಸ್ಯ ಸ ಸ್ವಪ್ನಸ್ಥಾನಃ, ಕಂಠದೇಶಸ್ಥ ಇತ್ಯರ್ಥಃ । ಅಂತಃಪ್ರಜ್ಞಃ - ಅಂತಶ್ಯಬ್ದೋಽತ್ರ ಬಾಹ್ಯಾರ್ಥಜ್ಞಾನಜನ್ಯ-ವಾಸನಾಪರಿಣಾಮರೂಪಾರ್ಥಪರಃ, ತಾನ್ ಅಂತಃಸ್ಥಿತಾನ್ ವಾಸನಾಮಯಾರ್ಥಾನ್ ಪ್ರಜ್ಞಾ-ಪಯತಿ ಜಾನಾತಿ ಚೇತ್ಯಂತಃಪ್ರಜ್ಞಃ । ಪ್ರಜ್ಞ ಇತಿ ಜಾನಾತೇಃ ಕಃ, ಸಪ್ತಾಂಗ ಏಕೋನವಿಶಂತಿಮುಖ ಇತಿ ಪ್ರಾಗ್ವತ್ ।**

**ಪ್ರವಿವಿಕ್ತಭುಕ್, ವಾಸನಾಮಯತಯಾ ಬಾಹ್ಯಾರ್ಥೇಭ್ಯೋ ವಿವಿಕ್ತಾನ್ ಸ್ವಾಪ್ನಪದಾರ್ಥಾನ್ ಭುಂಕ್ತೇ ಭೋಜಯತಿ ಚೇತಿ ಪ್ರವಿವಿಕ್ತಭುಕ್ । ತೇಜೋಮಯಚಿತ್ತಸ್ಥತಯಾ ಚಿತ್ತಸಂಬಂಧಿತ್ವೇನ ತೈಜಸನಾಮಾ ಆತ್ಮನೋ ದ್ವಿತೀಯಃ ಪಾದಃ, ದ್ವಿತೀಯಂ ರೂಪಮಿತ್ಯರ್ಥಃ ॥ 4 ॥**

ಜೀವನು ಎಲ್ಲಿದ್ದು ಸ್ವಪ್ನ ಪದಾರ್ಥಗಳನ್ನು ನೋಡುವನೋ ಅದೇ ಸ್ವಪ್ನವು ಎಂದರೆ ಕಂಠ ಎಂದರ್ಥ ಆ ಕಂಠವೇ ಸ್ಥಾನವಾಗುಳ್ಳವನೇ ತೈಜಸನು. ಎರಡನೆ ಅಂಶವಾದ ತೈಜಸನಿಗೆ ಸ್ವಪ್ನಾವಸ್ಥೆಯಲ್ಲಿ ಜೀವನ ಸ್ಥಾನವಾದ ಕಂಠದೇಶವು ಸ್ಥಾನವಾಗಿರುತ್ತದೆ ಎಂದರ್ಥ.

**ಅಂತಃಪ್ರಜ್ಞೆ :** ಬಾಹ್ಯ ವಸ್ತುಗಳ ದ್ವಾರಾ ಉಂಟಾದ ಸಂಸ್ಕಾರ ರೂಪ ವಾಸನೆಯೇ ಕಾರಣವಾಗಿರುವ ಸತ್ಯ ಪದಾರ್ಥಗಳೆಂದರ್ಥ. ಇವು ಅಂತರ ಪದಾರ್ಥಗಳು. ಇಂತಹ ವಾಸನಾಮಯ ಪದಾರ್ಥಗಳನ್ನು ತಾನು ಪ್ರಕೃಷ್ಟವಾಗಿ ತಿಳಿಯುತ್ತಾನೆ ಹಾಗೆ ಇತರರಿಗೆ ತಿಳಿಸಿಕೊಡುತ್ತಾನೆ.

ಸಪ್ತಾಂಗ, ಏಕೋನವಿಶಂತಿಮುಖ ಇವುಗಳು ಹಿಂದೆ ಹೇಳಿದ ವೈಶ್ವಾನರ ರೂಪದಂತೆಯೇ ಹತ್ತೊಂಭತ್ತು ಮುಖ, ನಾಲ್ಕು ಕೈಗಳು ಎರಡು ಪಾದಗಳು, ಒಂದು ಸೊಂಡಿಲು, ಹೀಗೆ ಏಳು ಅಂಗಗಳುಳ್ಳವನು ಎಂದು ತಿಳಿಯಬೇಕು. ಪ್ರವಿವಿಕ್ತಭುಕ್ = ಬಾಹ್ಯ ಪದಾರ್ಥಗಳಿಂದ ಅತ್ಯಂತ ಭಿನ್ನವಾದ ವಾಸನಾಮಯವಾದ ಸ್ವಾಪ್ನ ಪದಾರ್ಥಗಳನ್ನು ತಾನು ಭೋಗಿಸುವವನು ಹಾಗೂ ಜೀವನ ಭೋಗಿಸುವಂತೆ ಮಾಡುವವನು.

ತೈಜಸಃ ತೇಜೋಮಯವಾದ ಮನಸ್ಸಿನ ಸಂಬಂಧವನ್ನು ಹೊಂದಿ, ಚಿತ್ತ ಸಂಬಂಧ ಪಡೆದ ತೈಜಸ ನಾಮಕ, ಶ್ರೀಹರಿಯ (ಆತ್ಮನ) ಎರಡನೆ ಅಂಶವು.

**ವಿಶೇಷಾಂಶ** - ಹಿಂದಿನ ಸಂಸ್ಕಾರಗಳನ್ನು ಉಪಾದಾನವಾಗಿಟ್ಟುಕೊಂಡು ಭಗವಂತನು ಸ್ವಾಪ್ನ ಪದಾರ್ಥಗಳನ್ನು ಸೃಷ್ಟಿಸುತ್ತಾನೆ. ವಾಸನೋಪಾದಾನಕವಾದ್ದರಿಂದ ಸತ್ಯ ಆಗಿರುತ್ತದೆ. ಆದರೆ ಇವು ಅಂತರ ಪದಾರ್ಥಗಳಾಗಿದ್ದು ಬಾಹ್ಯ-ದಲ್ಲಿರುವ ಪದಾರ್ಥಗಳಿಗಿಂತ ವಿಭಿನ್ನವಾಗಿರುತ್ತವೆ. ಆದರೆ ಬಾಹ್ಯ ವಸ್ತುಗಳ ಸಾದೃಶ್ಯವನ್ನು ಹೊಂದಿ ಈ ಜೀವನು ಆ ವಸ್ತುವೇ ಇದು ಎಂಬ ಭ್ರಮೆಗೆ ಒಳಗಾಗುವನು. ಅದೇ ಇದು ಎಂಬ ಜ್ಞಾನ ಮಾತ್ರ ಮಿಥ್ಯೆಯಾಗಿರುತ್ತೆ.

ಹೀಗೆ ಬಾಹ್ಯ ವಸ್ತುಗಳಿಂದ ವಿಭಿನ್ನವಾದ (ಪ್ರವಿವಿಕ್ತ) ವಸ್ತುಗಳನ್ನು ಭೋಗಿಸುವದರಿಂದ ಭಗವಂತನು ಪ್ರವಿವಿಕ್ತಭುಕ್ ಎನಿಸುವನು.

ಜಾಗ್ರದ್‌ದರ್ಶನ ಸಂಸ್ಕಾರರೂಪತ್ವಾತ್ ಸ್ವಪ್ನಗಂ ತು ಯತ್ ।
ಪ್ರವಿವಿಕ್ತಂ ತು ತದ್‌ಜ್ಞಾನಕಾರಣೋಽಂತರ್ಜ್ಞ ಉಚ್ಯತೇ ॥ –ಭಾಷ್ಯ.

ತೃತೀಯಪಾದಸ್ಯ ಸ್ಥಾನಂ ವಕ್ತುಂ ಸ್ಥಾನಸ್ವರೂಪಂ ತಾವದಾಹ- ಯತ್ರೇತಿ ।

**ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ**
**ನ ಕಂಚನ ಸ್ವಪ್ನಂ ಪಶ್ಯತಿ ತತ್ ಸುಷುಪ್ತಮ್ ।**
**ಸುಷುಪ್ತಸ್ಥಾನೇ ಏಕೀಭೂತಃ ಪ್ರಜ್ಞಾನಘನ ಏವ**
**ಆನಂದಮಯೋ ಹಿ ಆನಂದಭುಕ್ ಚೇತೋಮುಖಃ**
**ಪ್ರಾಜ್ಞಃ ತೃತೀಯಃ ಪಾದಃ ॥ 5 ॥**

ಯತ್ರ ದೇಶೇ ಸುಪ್ತಃ ಅಜ್ಞಾನಾವೃತಃ, ಸುಂ - ಸುಖರೂಪಂ ಭಗವಂತಂ ಪ್ರಾಪ್ತ ಇತಿ ವಾ, 'ಪ್ರಾಜ್ಞೇನಾಽಽತ್ಮನಾ ಸಂಪರಿಷ್ವಕ್ತಃ' ಇತ್ಯಾದೇಃ । ಕಂಚನ = ಕಮಪಿ ಕಾಮಂ - ಕಾಮ್ಯಮಾನಮರ್ಥಂ ನ ಕಾಮಯತೇ, ಕಂಚನ ಸ್ವಪ್ನಂ ಸ್ವಾಪ್ನಪದಾರ್ಥಂ ಚ ನ ಪಶ್ಯತಿ । ಉಪಲಕ್ಷಣಮೇತತ್ । ಸ್ವಾತ್ಮಕಾಲಾ-ಜ್ಞಾನಾನಿ ವಿನಾ ಕಿಮಪಿ ನ ಪಶ್ಯತೀತ್ಯರ್ಥಃ, ತತ್‌ಸ್ಥಾನಂ ಸುಷುಪ್ತಮಿತ್ಯುಚ್ಯತೆ । ಸುಷುಪ್ತಮೇವ ಸ್ಥಾನಂ ಯಸ್ಯ ಸಃ ಸುಷುಪ್ತಸ್ಥಾನಃ, ಹೃತ್‌ಕರ್ಣಿಕಾಽಗ್ರಸ್ಥ ಇತಿ ಯಾವತ್ ।

ದೇಹದ ಯಾವ ಸ್ಥಾನದಲ್ಲಿ ಗಾಢ ನಿದ್ರೆಯಲ್ಲಿರುವ ಜೀವನು ಸುಪ್ತಃ ಅಜ್ಞಾನಾವೃತ್ತನಾಗಿ, ಅಥವಾ ಸು = ಸುಖ-ರೂಪಿಯಾದ ಭಗವಂತನನ್ನು ಹೊಂದಿದವನಾಗಿ, ಯಾವುದೇ ಕಾಮ್ಯವಾದ ವಸ್ತುವನ್ನಾಗಲೀ, ಯಾವುದೇ ಸ್ವಾಪ್ನ-ಪದಾರ್ಥವನ್ನಾಗಲೀ ನೋಡುವುದಿಲ್ಲವೋ ಆ ಸ್ಥಾನವನ್ನೇ ಸುಷುಪ್ತ ಸ್ಥಾನವೆನ್ನಲ್ಪಡುತ್ತದೆ. ಹೃತ್ಕರ್ಣಿಕಾಗ್ರ ಆಕಾಶದಲ್ಲಿ ಎಂದರ್ಥ.

ಏಕೀಭೂತಃ ವೈಶ್ವಾನರತೈಜಸಾಭ್ಯಾಂ ಸಂಶ್ಲೇಷವಿಶ್ಲೇಷರೂಪೈಕೀಭಾವಂ ಪ್ರಾಪ್ತಃ । ಪ್ರಜ್ಞಾನಘನಃ, ಅವಿದ್ಯಾವೃತೋ ಜೀವೋ ಘನ ಇತ್ಯುಚ್ಯತೇ । ಸುಷುಪ್ತಿವೇಲಾಯಾಂ ಜೀವಸ್ವರೂಪಮಜ್ಞಾನಂ, ತದುಪಲಕ್ಷಿತಂ ಕಾಲಂ ಚೇತಿ ತ್ರಯಮ್ । ಪ್ರಜ್ಞಾಪಯತಿ ಜೀವಸ್ಯೇತಿ ಪ್ರಜ್ಞಾನಘನಃ । ಪ್ರಪೂರ್ವಾ-ದಂತರ್ಣೀತಣ್ಯರ್ಥಾತ್ ಜ್ಞಾ ಅವಬೋಧನ ಇತಿ ಧಾತೋಃ ಕೃತ್ಯಲ್ಯುಟೋ ಬಹುಲಮಿತಿ ಬಹುಲ-ಗ್ರಹಣಾತ್ ಕರ್ಮಣಿ ಲ್ಯುಟಿ ಅನಾದೇಶೇ ಪ್ರಜ್ಞಾನಃ, ಪ್ರಜ್ಞಾಪಿತೋ ಘನೋ ಜೀವೋ ಯೇನ ಸಃ ಪ್ರಜ್ಞಾನಘನ ಇತಿ ವಿಗ್ರಹಃ । ಯದ್ವಾ ಘನಪ್ರಜ್ಞ ಇತಿ ವಕ್ಷ್ಯಮಾಣತ್ವಾದಿಹಾಪಿ ಪ್ರಜ್ಞಾನಘನ ಇತ್ಯಸ್ಯ ಘನಪ್ರಜ್ಞಾನ ಇತಿ ವಿಪರೀತಸಮಾಸೋ ಧ್ಯೇಯಃ । ತಥಾತ್ವೇ ಅಂತರ್ಣೀತಣ್ಯರ್ಥಾತ್ಕರ್ತರಿ ಲ್ಯುಟ್ ।

ಏಕೀಭೂತ = ವೈಶ್ವಾನರ, ತೈಜಸ ರೂಪಗಳಿಂದ ಪ್ರತಿನಿತ್ಯವೂ, ಸಂಶ್ಲೇಷ- ಸೇರುವುದು, ವಿಶ್ಲೇಷ ದೂರವಾಗುವುದು ಇವುಗಳಿಂದ ಏಕೀಭಾವವನ್ನು ಹೊಂದುವವನು ಎಂದರ್ಥ.

ಪ್ರಜ್ಞಾನಘನ :- ಅವಿದ್ಯೆಯಿಂದ ಕೂಡಿದ ಜೀವನೇ ಘನ ಎಂದು ಕರೆಯಲ್ಪಡುವನು, ಗಾಢ ನಿದ್ರೆಯಲ್ಲಿ ತನ್ನ ಸ್ವರೂಪವನ್ನೂ, ಅಜ್ಞಾನವನ್ನೂ, ತದುಪಲಕ್ಷಿತವಾದ ಕಾಲವನ್ನು ಹೀಗೆ ಮೂರನ್ನೂ ಹೊರತು ಬೇರೆ ಏನನ್ನೂ ತಿಳಿಸಿ-ಕೊಡದವನೆ ಪ್ರಜ್ಞಾನಘನ ಅಥವಾ ಕಾಲ, ಸುಪ್ತವಸ್ಥೆ, ಸುಖ ಇವುಗಳಿಂದ ಕೂಡಿದ ಅಜ್ಞಾನಾವೃತನಾದ ಜೀವಾತ್ಮನನ್ನು ತಿಳಿಸಿಕೊಡುವ ಪ್ರಾಜ್ಞನಾಮಕ ಶ್ರೀಹರಿಯು ಘನಪ್ರಜ್ಞ ಎನಿಸಿರುವನು. ಘನಪ್ರಜ್ಞ ಎಂದು ಮುಂದೆ ಹೇಳುವದರಿಂದ ಇಲ್ಲಿಯೂ ಘನಪ್ರಜ್ಞಾನ ಅಥವಾ ಘನವೆನಿಸುವ ಜೀವಾತ್ಮನನ್ನು ತಿಳಿಸುವವನೆಂಬ ಅರ್ಥದಲ್ಲಿ ಘನಪ್ರಜ್ಞಾನವೆಂದು ಹೇಳಬೇಕಿದ್ದರೂ ಪ್ರಜ್ಞಾನಘನ ಎನ್ನಲಾಗಿದೆ. ಸಮಾಸದಲ್ಲಿ ಪದಗಳು ಹಿಂದು ಮುಂದಾಗುತ್ತವೆ. ಇದು ವಿಪರೀತ ಸಮಾಸವೆಂದು ತಿಳಿಯಬೇಕು.

**ಆನಂದಮಯಃ = ಆನಂದಪ್ರಚುರಃ । ಪೂರ್ಣಾನಂದ ಇತಿ ಯಾವತ್ । 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಪ್ರಸಿದ್ಧಮಿತಿ ಹೇರರ್ಥಃ । ಆನಂದಭುಕ್ - ವಿಷಯಭೋಗಾನ್ ವಿನೈವ ಆನಂದಂ ಭುಂಕ್ತೇ ಭೋಜಯತಿ ಚೇತ್ಯಾನಂದಭುಕ್, ಅತ್ರ ಸ್ಥೂಲಭುಕ್ತ್ವಂ ಪ್ರವಿವಿಕ್ತಭುಕ್ತ್ವಮ್ ಆನಂದಭುಕ್ತ್ವಂ ಚ ನಿತ್ಯಪೂರ್ಣಾನಂದಾನುಭವರೂಪಸ್ಯ ಕ್ರೀಡಾರೂಪಂ ಧ್ಯೇಯಮ್ ।**

ಆನಂದಮಯನೆಂಬಲ್ಲಿರುವ ಮಯಟ್ ಪ್ರತ್ಯಯವು ಪ್ರಾಚುರ್ಯಾರ್ಥದಲ್ಲಿದ್ದು ಆನಂದ ಪೂರ್ಣವೆಂದು ತಿಳಿಸುತ್ತದೆ. ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾಸಹ ಎಂಬ ಶ್ರುತಿಯಿಂದ ಅವನ ಆನಂದವು ಇಷ್ಟೇ ಎಂದು ಹೇಳುವುದಕ್ಕಾಗಲಿ, ಮನಸ್ಸಿನಿಂದ ತಿಳಿಯುವುದಕ್ಕಾಗಲೀ ಸಾಧ್ಯವಿಲ್ಲವಾದ್ದರಿಂದ ಭಗವಂತನ ಆನಂದಭುಕ್ = ವಿಷಯ ಪದಾರ್ಥಗಳನ್ನು ಅನುಭವಿಸದೆ ಕೇವಲ ಸ್ವರೂಪಾನಂದ ಅಭಿವ್ಯಕ್ತಮಾಡಿ, ಆನಂದವನ್ನು ಭೋಗ ಮಾಡುವುದರಿಂದ ಪ್ರಾಜ್ಞನು ಆನಂದ ಎನಿಸಿದ್ದಾನೆ. ವಿಶ್ವ-ತೈಜಸ-ಸ್ವರೂಪಗಳು ಆನಂದಭೋಗ ಮಾಡಿದರೂ ಆ ಆನಂದವು ಸ್ವರೂಪ-ಭೂತವಲ್ಲ, ವಿಷಯಭೋಗಮೂಲಕವಾಗಿರುತ್ತದೆ.

ವಿಶ್ವ, ತೈಜಸ, ಪ್ರಾಜ್ಞರೂಪಗಳು ಕ್ರಮವಾಗಿ ಸ್ಥೂಲಭುಕ್, ಪ್ರವಿವಿಕ್ತಭುಕ್ ಹಾಗೂ ಆನಂದಭುಕ್ ಎಂದು ನಿತ್ಯ ಪೂರ್ಣಾನಂದಾನುಭವರೂಪನಿಗೆ ಕೇವಲ ಕ್ರೀಡಾರೂಪವೆಂದು ತಿಳಿಯುವುದು.

**ಚೇತೋಮುಖಃ = ಜ್ಞಾನಸ್ವರೂಪಮುಖಃ । ಮುಖ ಇತ್ಯುಪಲಕ್ಷಣಮ್ । ಜ್ಞಾನರೂಪ-ಸರ್ವಾವಯವ ಇತ್ಯರ್ಥಃ ।**

**ಏತದಾನಂದಮಯತ್ವ-ಚೇತೋಮುಖತ್ವರೂಪವಿಶೇಷಣದ್ವಯಂ ಪ್ರಾಗುಕ್ತರೂಪದ್ವಯೇನಾಂತಃ-ಪ್ರಜ್ಞಮಿತಿ ವಕ್ಷ್ಯಮಾಣಚತುರ್ಥರೂಪೇ ಚ ಧ್ಯೇಯಮ್ । ಪ್ರಾಜ್ಞಃ = ಪ್ರಕರ್ಷೇಣ ನ ಜ್ಞಾಪಯತೀತಿ ಪ್ರಾಜ್ಞಃ । ಜೀವಸ್ವರೂಪಕಾಲಾಜ್ಞಾನಾತಿರಿಕ್ತಂ ಬಾಹ್ಯಂ ಸ್ವಾಪ್ನಂ ವಾ ಕಿಮಪಿ ನ ಜ್ಞಾಪಯತೀತಿ ಪ್ರಾಜ್ಞನಾಮಕ ಇತ್ಯರ್ಥಃ । ಪ್ರಪೂರ್ವಾನ್ನಞುಪಪದಾದಂತರ್ಣೀತಣ್ಯರ್ಥಾದಾತಶ್ಚೋಪಸರ್ಗ ಇತಿ ಕಪ್ರತ್ಯಯಃ । ಆತ್ಮನಸ್ತೃತೀಯಃ ಪಾದಃ = ತೃತೀಯರೂಪಮ್ ॥ 5 ॥**

ಚೇತೋಮುಖ ಎಂದರೆ ಜ್ಞಾನರೂಪವಾದ ಮುಖವುಳ್ಳವನೆಂದರ್ಥ. ಮುಖವು ಜ್ಞಾನಸ್ವರೂಪವೆಂದಾಗ ಉಪ-ಲಕ್ಷಣತಯಾ ಸರ್ವಾವಯವಗಳೂ ಜ್ಞಾನಸ್ವರೂಪವೆಂದು ತಿಳಿಯಬೇಕು.

ಇಲ್ಲಿ ಪ್ರಾಜ್ಞರೂಪಿಗೆ ಹೇಳಿದ ಆನಂದಮಯತ್ವ ಚೇತೋಮುಖತ್ವ, ರೂಪ ವಿಶೇಷಣವೆರಡು ವಿಶ್ವ, ತೈಜಸ ಹಾಗೂ ಮುಂದೆ ನಾಂತಃಪ್ರಜ್ಞವೆಂಬಲ್ಲಿ ಹೇಳುವ ತುರ್ಯ ರೂಪಗಳಲ್ಲೂ ತಿಳಿಯಬೇಕು. ಪ್ರಾಜ್ಞಃ = ಜೀವಸ್ವರೂಪ, ಕಾಲ, ಅಜ್ಞಾನ ಹೊರತಾಗಿ ಬೇರೆಯಾದ ಬಾಹ್ಯ ಪದಾರ್ಥವನ್ನಾಗಲೀ, ಸ್ವಾಪ್ನ ಪದಾರ್ಥವನ್ನಾಗಲಿ ಜ್ಞಾಪಿಸಿಕೊಡುವುದಿಲ್ಲ-ವಾದ್ದರಿಂದ ಭಗವಂತನ ಈ ರೂಪಕ್ಕೆ ಪ್ರಾಜ್ಞ ಎಂದು ಹೆಸರಿದೆ. ಪ್ರಾಜ್ಞನು ಭಗವಂತನ ಮೂರನೆ ರೂಪ.

**ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽಂತರ್ಯಾಮೀ ।**
**ಏಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಮ್ ॥ 6 ॥**

**ಏವಂ ರೂಪತ್ರಯಂ ನಿರೂಪ್ಯ ಚತುರ್ಥಪಾದಂ ನಾಂತಃಪ್ರಜ್ಞಮಿತ್ಯಾದಿನಾ ನಿರೂಪಯಿಷ್ಯನ್ ವೈಶ್ವಾನರಾದಿರೂಪಾಣಾಮ್ ಉಕ್ತಸ್ಥಾನವ್ಯಾಪಾರಾದ್ಯರ್ಥೇಷು ಶ್ಲೋಕಾನ್ ವಿವಕ್ಷುಃ ಮಧ್ಯೇ ವಕ್ಷ್ಯ-ಮಾಣಚತುರ್ಥರೂಪೇಣ ಸಹ ಚತುರ್ಣಾಂ ರೂಪಾಣಾಂ ಮಹಿಮಾನಮಾಹ - ಏಷ ಇತಿ ।**

ಹೀಗೆ ಮೂರು ರೂಪಗಳನ್ನು ನಿರೂಪಿಸಿ, ನಾಂತಃ ಪ್ರಜ್ಞ ಇತ್ಯಾದಿ ಮುಂದಿನ ವಾಕ್ಯಗಳಿಂದ ನಾಲ್ಕನೇ ರೂಪವನ್ನು ನಿರೂಪಿಸುವವರಾಗಿ, ವೈಶ್ವಾನರನೇ ಮೊದಲಾದ ರೂಪಗಳ ಸ್ಥಾನ ಹಾಗೂ ವ್ಯಾಪಾರಾದಿಗಳ ವಿಷಯದಲ್ಲಿ ಶ್ಲೋಕಗಳನ್ನು ಪ್ರಮಾಣೀಕರಿಸುವವರಾಗಿ, ನಾಲ್ಕನೆಯ ತುರೀಯರೂಪದೊಂದಿಗೆ ಉಳಿದ ಮೂರು ರೂಪಗಳ ಮಹಿಮೆಯನ್ನು ಹೇಳಲು ಏಷ ಎಂಬುದರಿಂದ ಪ್ರಾರಂಭಿಸುತ್ತಾರೆ.

**ಏಷ ಉಕ್ತವಕ್ಷ್ಯಮಾಣಚತೂರೂಪ ಆತ್ಮಾ । ಏಷ ಇತ್ಯಸ್ಯಾಭ್ಯಾಸಃ ತಾತ್ಪರ್ಯಾರ್ಥಃ, ಅಂತ-ರ್ಯಾಮೀ = ಅಂತರ್ನಿಯಂತಾ । ಸರ್ವಸ್ಯ ಯೋನಿಃ, ಕಾರಣಮಿತ್ಯಸ್ಯ ವಿವರಣಂ ಪ್ರಭವಾಪ್ಯಯೌ ಹಿ ಭೂತಾನಾಮಿತಿ । ಹಿ = ಯಸ್ಮಾತ್, ಪ್ರಭವಾಪ್ಯಯೌ, ಪ್ರಭವಾಪ್ಯಯಹೇತುರತ ಇತ್ಯರ್ಥಃ ॥ 6 ॥**

ಏಷಃ = ಹಿಂದೆ ಹೇಳಿದ ವಿಶ್ವ-ತೈಜಸ-ಪ್ರಾಜ್ಞ ಎಂಬ ರೂಪಗಳೂ ಹಾಗು ಮುಂದೆ ಹೇಳಲ್ಪಡುವ ತುರೀಯವೆಂಬ ಚತೂರೂಪವೇ ಭಗವಂತನು ಎಂದರ್ಥ.

ಏಷ ಏಷ ಎಂದು ನಾಲ್ಕು ಬಾರಿ ಹೇಳಿರುವುದು ತಾತ್ಪರ್ಯಜ್ಞಾನಕ್ಕಾಗಿ ಎಂದು ತಿಳಿಯಬೇಕು. ಅಂತರ್ಯಾಮೀ ಎಂದರೆ ಅಂತರ್ನಿಯಾಮಕನೆಂದರ್ಥ. ಸರ್ವಸ್ಯಯೋನಿಃ ಸರ್ವಕ್ಕೂ ಕಾರಣನು. ಇವನಿಂದಲೇ ಸಕಲ ಚೇತನಾಚೇತನಾತ್ಮಕ ಪ್ರಪಂಚವು ಸೃಷ್ಟಿಸಲ್ಪಟ್ಟು, ಅವನಿಂದಲೇ ನಾಶಹೊಂದುತ್ತದೆ ಆದ್ದರಿಂದಲೇ ಇವನು ಸರ್ವಕ್ಕೂ ಕಾರಣ ಎಂದು ಸರ್ವಸ್ಯಯೋನಿಃ ಎಂಬುದರ ವಿವರಣೆಯೇ ಪ್ರಭವಾಪ್ಯಯೌ ಹಿ ಭೂತಾನಾಂ ಎಂಬುದು.

**ಅತ್ರೈತೇ ಶ್ಲೋಕಾ ಭವಂತಿ ।**
**ಬಹಿಃಪ್ರಜ್ಞೋ ವಿಭುರ್ವಿಶ್ವೋ ಹ್ಯಂತಃಪ್ರಜ್ಞಸ್ತು ತೈಜಸಃ ।**
**ಘನಪ್ರಜ್ಞಸ್ತಥಾ ಪ್ರಾಜ್ಞ ಏಕ ಏವ ತ್ರಿಧಾ ಸ್ಮೃತಃ ॥ 7 ॥**

ಮೇಲೆ ಹೇಳಿದ ವಿಷಯಗಳಲ್ಲಿ ಈ ಮುಂದಿನ ಬ್ರಹ್ಮ ದೃಷ್ಟವಾದ ಮಂತ್ರಗಳು ಸಂವಾದಿಯಾಗಿವೆ. ವೈಶ್ವಾನರನು ಬಾಹ್ಯಪದಾರ್ಥಜ್ಞಾನ ನೀಡುವವನು, ಸರ್ವಸ್ವಾಮಿಯೂ ಆಗಿರುವನು, ತೈಜಸನಾದರೂ ಸ್ವಾಪ್ನಪದಾರ್ಥಗಳ ಜ್ಞಾನ

ನೀಡುವವನು. ಪ್ರಾಜ್ಞನಾದರೂ ಪ್ರಜ್ಞಾನಘನನು, ಹೀಗೆ ಒಂದೇ ರೂಪವೇ ಮೂರು ರೂಪದಿಂದಿವೆ ಎಂದು ಬ್ರಹ್ಮದೇವರು ತಿಳಿದಿದ್ದಾರೆ.

**ಉಪನಿಷತ್ ಸ್ವಯಂ ಪ್ರಮಾಣತ್ವೇऽಪಿ ದಾರ್ಢ್ಯಾಯ ಸ್ವೋಕ್ತಾರ್ಥೇ ಬ್ರಹ್ಮದೃಷ್ಟಾನ್ ಮಂತ್ರಾನ್ ಉದಾಹರತಿ - ಅತ್ರೈತೇ ಶ್ಲೋಕಾ ಭವಂತೀತಿ ।**

ಉಪನಿಷತ್ತು ಸ್ವತಃ ಪ್ರಮಾಣವಾದ್ದರಿಂದ ತಾವು ಹೇಳಿದ ವಿಷಯಗಳು ಪ್ರಾಮಾಣಿಕವೆ. ಆದರೂ ದಾರ್ಢ್ಯಕ್ಕಾಗಿ ಪ್ರಮಾಣ ಶ್ಲೋಕಗಳನ್ನು ಹೇಳುತ್ತಿದೆ.

**ಸಂವಾದಿನ ಇತಿ ಶೇಷಃ । ವೈಶ್ವಾನರೋ ಬಹಿಃಪ್ರಜ್ಞಃ । ತೈಜಸೋऽಂತಪ್ರಜ್ಞಃ । ಪ್ರಾಜ್ಞಃ ಪ್ರಜ್ಞಾನಘನ ಇತ್ಯುಕ್ತಾರ್ಥೇ ಮಂತ್ರಮಾಹ - ಬಹಿರಿತಿ ।**

**ವಿಶ್ವೋ = ವೈಶ್ವಾನರಃ । ಪದಾನಾಮರ್ಥಃ ಪೂರ್ವವದ್ ಧ್ಯೇಯಃ । ಸ್ಮೃತಃ ಇತಿ । ಮಂತ್ರದ್ರಷ್ಟ್ರಾ ಬ್ರಹ್ಮಣಾ ಸ್ಮೃತ ಇತ್ಯರ್ಥಃ ॥ 7 ॥**

ಬಹಿಪ್ರಜ್ಞಃ ಇತ್ಯಾದಿ ಸಂವಾದಿರೂಪ ಶ್ಲೋಕಗಳಲ್ಲಿ ಬರುವ ಶಬ್ದಾರ್ಥಗಳನ್ನು ಹಿಂದೆ ಹೇಳಿದಂತೆಯೇ ತಿಳಿಯಬೇಕು.

ವಿಶ್ವ ಎಂದರೆ ವೈಶ್ವಾನರನೆಂದರ್ಥ. ತ್ರಿಧಾಸ್ಮೃತಃ ಎಂದರೆ ಮೂರು ರೂಪದಿಂದ ಎಂದು ಬ್ರಹ್ಮದೇವರಿಂದ ತಿಳಿಯಲ್ಪಟ್ಟಿದೆ ಎಂದರ್ಥ.

**ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯಂತಸ್ತು ತೈಜಸಃ ।**
**ಆಕಾಶೇ ಚ ಹೃದಿ ಪ್ರಾಜ್ಞಃ ತ್ರಿಧಾ ದೇಹೇ ವ್ಯವಸ್ಥಿತಃ ॥ 8 ॥**

**ಜಾಗರಿತಸ್ಥಾನಃ ಸ್ವಪ್ನಸ್ಥಾನಃ ಸುಷುಪ್ತಸ್ಥಾನಃ ಇತ್ಯುಕ್ತಾರ್ಥೇ ಮಂತ್ರಮಾಹ - ದಕ್ಷಿಣಾಕ್ಷೀತಿ । ಮುಖೇ ಅಗ್ರಭಾಗೇ । ಅಂತರಿತ್ಯಸ್ಯ ವಿವರಣಂ - ಮನಸೀತಿ । ಆಕಾಶೇ ಚ ಹೃದಿ ಹೃದಯಾಕಾಶೇ, ಹೃತ್ಕರ್ಣಿಕಾऽಗ್ರಸ್ಥಾಕಾಶ ಇತ್ಯರ್ಥಃ ॥ 8 ॥**

ವೈಶ್ವಾನರನು ಬಲಗಣ್ಣಿನ ಅಗ್ರಭಾಗದಲ್ಲಿ , ತೈಜಸನಾದರೂ ಮನಸ್ಸಿನಲ್ಲಿಯೂ, ಪ್ರಾಜ್ಞನಾದರೂ ಹೃತ್ಕರ್ಣಿಕಾಗ್ರ ಭಾಗದ ಆಕಾಶದಲ್ಲಿಯೂ ಹೀಗೆ ಮೂರು ರೂಪದಿಂದ ದೇಹದಲ್ಲಿ ಭಗವಂತನು ವ್ಯವಸ್ಥಿತವಾಗಿರುವನು.

ವಿಶ್ವಾದಿ ಮೂರು ರೂಪಗಳು ಕ್ರಮವಾಗಿ ಬಲಗಣ್ಣು, ಕಂಠ, ಹೃದಯಾಗ್ರಾಕಾಶದಲ್ಲಿ ವ್ಯವಸ್ಥಿತನಾಗಿರುವನೆಂಬಲ್ಲಿ ಪ್ರಮಾಣ ಶ್ಲೋಕವನ್ನು ದಕ್ಷಿಣಾಕ್ಷಿ ಎಂಬ ಶ್ಲೋಕದಿಂದ ಹೇಳುವರು, ಮುಖೇ ಎಂದರೆ ಬಲಗಣ್ಣಿನ ಅಗ್ರಭಾಗದಲ್ಲಿ ಎಂದರ್ಥ. ಅಂತಃ = ಒಳಗೆ ಎಂದರೆ ಮನಸ್ಸಿನ ಒಳಗೆ ಎಂಬರ್ಥವನ್ನು ಮನಸಿ ಎಂಬ ಪದ ತಿಳಿಸುತ್ತದೆ. ಆಕಾಶೇ ಚ ಹೃದಿ ಎಂದರೆ ಹೃದಯಾಕಾಶದಲ್ಲಿ ಎಂದರ್ಥ. ಅಂದರೆ ಹೃದಯ ಕರ್ಣಿಕೆಯ ತುದಿಯಲ್ಲಿರುವ ಆಕಾಶದಲ್ಲಿ ಎಂದಭಿಪ್ರಾಯ.

**ವಿಶ್ವೋ ಹಿ ಸ್ಥೂಲಭುಜ್ ನಿತ್ಯಂ ತೈಜಸಃ ಪ್ರವಿವಿಕ್ತಭುಕ್ ।**
**ಆನಂದಭುಕ್ ತಥಾ ಪ್ರಾಜ್ಞಸ್ತ್ರಿಧಾ ಭೋಗಂ ನಿಬೋಧತ ॥ 9 ॥**

ವೈಶ್ವಾನರನು ಸ್ಥೂಲವಾದ ಬಾಹ್ಯ ಶುಭ ಭೋಗಗಳನ್ನು ಭೋಗಿಸುವವನು. ತೈಜಸನಾದರೂ ಬಾಹ್ಯ ಪದಾರ್ಥ-ಗಳಿಂದ ಅತ್ಯಂತ ಭಿನ್ನವಾದ ಸ್ವಾಪ್ನ ಪದಾರ್ಥಗಳನ್ನು ಭೋಗಿಸುವವನಾಗಿರುವನು. ಪ್ರಾಜ್ಞನಾದರೂ ಸ್ವರೂಪಾನಂದವನ್ನು ಭೋಗಿಸುತ್ತಾನೆ. ಹೀಗೆ ಮೂರು ವಿಧವಾದ ಭೋಗಗಳನ್ನು ಆಯಾ ರೂಪಗಳಿಂದ ಭೋಗಿಸುತ್ತಾನೆಂದು ತಿಳಿಯಿರಿ.

**ಸ್ಥೂಲಭುಗಿತ್ಯಾದ್ಯುಕ್ತಾರ್ಥೇ ಮಂತ್ರಮಾಹ - ವಿಶ್ವೋ ಹೀತಿ । ನಿಬೋಧತೇತಿ ಮಂತ್ರದ್ರಷ್ಟ್ರಾ ಬ್ರಹ್ಮಣಾ ಸ್ವೋಪದೇಶ್ಯಾನ್ ಪ್ರತ್ಯುಚ್ಯತೇ । ಏವಂ ವಿಜಾನಥೇತ್ಯಪಿ ಧ್ಯೇಯಮ್ ॥ 9 ॥**

ಸ್ಥೂಲಭುಕ್ ಇತ್ಯಾದಿ ವಿಷಯದಲ್ಲಿ ಪ್ರಮಾಣಶ್ಲೋಕ ಹೇಳುತ್ತಿರುವರು. ನಿಬೋಧತ = ತಿಳಿಯಿರಿ ಎಂದು ಬ್ರಹ್ಮದೇವರು ತಮ್ಮ ಶಿಷ್ಯರಿಗೆ ಬೋಧಿಸುತ್ತಾರೆ. ಇದೇ ರೀತಿ ವಿಜಾನಥ ಎಂಬಲ್ಲಿಯೂ ತಿಳಿಯಬೇಕು.

**ಸ್ಥೂಲಂ ತರ್ಪಯತೇ ವಿಶ್ವಂ ಪ್ರವಿವಿಕ್ತಂ ಚ ತೈಜಸಮ್ ।**
**ಆನಂದಂ ಚ ತಥಾ ಪ್ರಾಜ್ಞಂ ತ್ರಿಧಾ ತೃಪ್ತಿಂ ವಿಜಾನಥ ॥ 10 ॥**

**ಉಕ್ತ ಏವಾರ್ಥೇ ಮಂತ್ರಾಂತರಂ ಪಠತಿ ಸ್ಥೂಲಮಿತಿ । ಸ್ಥೂಲಂ ಭೋಗ್ಯಂ ವಸ್ತು ಕರ್ತೃ । ವಿಶ್ವಂ ಕರ್ಮ । ಏವಮಗ್ರೇಽಪಿ । ನಿತ್ಯತೃಪ್ತಸ್ಯ ಸ್ಥೂಲಾದಿನಾ ತೃಪ್ತಿಃ ಕ್ರೀಡಾರೂಪಾ ಧ್ಯೇಯಾ । ಆನಂದ-ಮಾನಂದಃ ಲಿಂಗವ್ಯತ್ಯಯಾತ್ । ವಿಜಾನಥ = ವಿಜಾನೀಥ । ವಿಕರಣವ್ಯತ್ಯಯಾತ್ ॥ 10 ॥**

ಸ್ಥೂಲವಾದ ಭೋಗ್ಯವಸ್ತು ಇಲ್ಲಿ ಕರ್ತೃ ಪದವಾಗಿದೆ. ವಿಶ್ವಂ ಎಂಬುದು ಕರ್ಮ ಪದವು. ಹೀಗೆಯೇ ಮುಂದೆಯೂ ತಿಳಿಯಬೇಕು.

ನಿತ್ಯತೃಪ್ತನಾದ ಭಗವಂತನಿಗೆ ಸ್ಥೂಲಭೋಗ ವಸ್ತುಗಳಿಂದ ತೃಪ್ತಿಯಾಗುವುದೆಂದರೆ ಅದು ಕೇವಲ ಕ್ರೀಡಾರೂಪ-ವಾದದ್ದೆಂದು ತಿಳಿಯಬೇಕು. ಆನಂದಂ ಎಂಬುದಕ್ಕೆ ಲಿಂಗವ್ಯತ್ಯಾಸದಿಂದ ಎಂದು ಪುಲ್ಲಿಂಗವನ್ನು ತಿಳಿಯಬೇಕು. ವಿಜಾನಥ ಎಂಬುದನ್ನು ವಿಕರಣ ಪ್ರತ್ಯಯ ವ್ಯತ್ಯಾಸದಿಂದ ವಿಜಾನೀಥ ಎಂದು ತಿಳಿಯಬೇಕು.

**ತ್ರಿಷು ಧಾಮಸು ಯದ್ ಭೋಜ್ಯಂ**
**ಭೋಕ್ತಾ ಯಶ್ಚ ಪ್ರಕೀರ್ತಿತಃ ।**
**ವೇದೈತದುಭಯಂ ಯಸ್ತು**
**ಸ ಭುಂಜಾನೋ ನ ಲಿಪ್ಯತೇ ॥ 11 ॥**

ಬಲಗಣ್ಣು, ಮನಸ್ಸು, ಹೃದಯಾಕಾಶ ಸ್ಥಾನಗಳಲ್ಲಿ ಸ್ಥೂಲಾದಿಭೋಗ್ಯ ವಸ್ತುಗಳನ್ನು ಯಾವ ವಿಶ್ವಾದಿ ರೂಪಗಳಿಂದ ಭೋಗಿಸುತ್ತಾನೆಂದು ಹೇಳಲ್ಪಟ್ಟಿತೋ ಈ ಭೋಕ್ತೃ-ಭೋಜ್ಯಗಳ ಲಕ್ಷಣವನ್ನು ಯಾರು ತಿಳಿಯುವನೋ ಅವನು ಜ್ಞಾನಿಯೆನಿಸುವನು. ಅವನು ವಿಷಯಾದಿ ಭೋಗಗಳನ್ನು ಅನುಭವಿಸಿದರೂ ಅವನಿಗೆ ಕರ್ಮ ಲೇಪವಾಗುವುದಿಲ್ಲ.

**ವಿಶ್ವಾದಿರೂಪತ್ರಯಸ್ವರೂಪಂ ತತ್‌ಸ್ಥಾನೇಷು ತದ್ಭೋಜ್ಯಸ್ವರೂಪಂ ಜಾನತಃ ಫಲಮಾಹ - ತ್ರಿಷ್ವಿತಿ ।**

ವಿಶ್ವಾದಿರೂಪತ್ರಯಗಳ ಸ್ವರೂಪ ಹಾಗೂ ಆಯಾಯ ಸ್ಥಾನಗಳು, ಅವುಗಳಿಂದ ಭೋಗ್ಯ ವಸ್ತುಗಳ ಸ್ವರೂಪವನ್ನು ತಿಳಿದವರಿಗೆ ಬರುವ ಫಲವನ್ನು ತ್ರಿಷು ಎಂಬುದರಿಂದ ತಿಳಿಸುತ್ತಾರೆ.

**ತ್ರಿಷು ಧಾಮಸು = ಅಕ್ಷಿಮನೋಹೃದಯಾಕಾಶರೂಪೇಷು ಯದ್ಭೋಜ್ಯಂ ಸ್ಥೂಲಾದಿ, ಯಶ್ಚ ಭೋಕ್ತಾ ವಿಶ್ವಾದಿ-ತ್ರಿರೂಪಾತ್ಮಾ, ಏತದುಭಯಂ ಭೋಕ್ತಭೋಜ್ಯಲಕ್ಷಣಮುಭಯಂ ಯಸ್ತು = ಯೋಽಧಿಕಾರೀ, ವೇದ = ಜಾನಾತಿ ಸ ಜ್ಞಾನೀ ವಿಷಯಾನ್ ಭುಂಜಾನಃ ಅನುಭವನ್ನಪಿ ತತ್ಕೃತ-ಲೇಪನಂ ನ ಪ್ರಾಪ್ನೋತಿ । ತತ್ಕೃತೋಚ್ಚತ್ವಾದಿವಿಕಾರಂ ನ ಪ್ರಾಪ್ನೋತೀತ್ಯರ್ಥಃ ॥ 11 ॥**

ತ್ರಿಷು ಧಾಮಸು = ಬಲಗಣ್ಣು, ಮನಸ್ಸು, ಹೃದಯಾಕಾಶ ಸ್ಥಾನಗಳಲ್ಲಿ ಎಂದರ್ಥ. ಯದ್ಭೋಜ್ಯಂ = ಸ್ಥೂಲಾದಿ = ಸ್ಥೂಲಾದಿ ಭೋಗ್ಯ ವಸ್ತುಗಳನ್ನು, ಯಶ್ಚ ಭೋಕ್ತಾ = ಯಾವ ವಿಶ್ವಾದಿ ರೂಪಗಳಿಂದ ಭೋಗಿಸುತ್ತಾನೆಂದು ಹೇಳಲ್ಪಟ್ಟಿ-ದೆಯೋ ಎಂದರ್ಥ. ಈ ಭೋಕ್ತ ಭೋಜ್ಯಗಳ ಲಕ್ಷಣವನ್ನು ಎಂದು ಏತದುಭಯಂ ಎಂಬುದರ ಅರ್ಥ. ಹೀಗೆ ಯಾವ ಅಧಿ ಕಾರಿಯು ತಿಳಿಯುತ್ತಾನೋ ಅವನು ಜ್ಞಾನಿಯು, ಇವನು ವಿಷಯಾದಿಗಳನ್ನು ಅನುಭವಿಸಿದರೂ, ಆ ಭೋಗ ಪ್ರಯುಕ್ತ ಉಚ್ಚತ್ವ ನೀಚತ್ವಾದಿ ವಿಕಾರಗಳಿಗೆ ತುತ್ತಾಗುವುದಿಲ್ಲ.

**ಪ್ರಭವಃ ಸರ್ವಭೂತಾನಾಂ ಸತಾಮಿತಿ ವಿನಿಶ್ಚಯಃ ।**
**ಸರ್ವಂ ಜನಯತಿ ಪ್ರಾಣಶ್ಚೇತೋಽಂಶೂನ್ ಪುರುಷಃ ಪೃಥಕ್ ॥ 12 ॥**

**ಏಷ ಯೋನಿಸ್ಸರ್ವಸ್ಯೇತ್ಯುಕ್ತಾರ್ಥೇ ಮಂತ್ರಮಾಹ - ಪ್ರಭವ ಇತಿ । ಪ್ರಭವತಿ ಉತ್ಪದ್ಯತೇ ಅನೇನ ಇತಿ ಪ್ರಭವಃ । ಸರ್ವಭಾವಾನಾಂ ಅಶೇಷವಸ್ತೂನಾಂ ಯಥಾಯೋಗಂ ಉತ್ಪತ್ತಿಹೇತುಶ್ಚತೂರೂಪ ಆತ್ಮೇತಿ ಯೋಜ್ಯಮ್ । ಇತಿ ಸತಾಂ ವಿನಿಶ್ಚಯ ಇತ್ಯುಕ್ತ್ಯಾ ಅಸತಾಮನ್ಯಥಾ ನಿಶ್ಚಯ ಇತಿ ಲಭ್ಯತೇ । ತದಗ್ರೇ ವಿವರಿಷ್ಯತೇ । ಸರ್ವಪ್ರಭವತ್ವಂ ವ್ಯನಕ್ತಿ - ಸರ್ವಂ ಜನಯತಿ ಪ್ರಾಣ ಇತಿ ॥**

ಏಷ ಯೋನಿಃ ಸರ್ವಸ್ಯ ಎಂದು ಹೇಳಿದ ವಿಷಯದಲ್ಲಿ ಮಂತ್ರವು ಸರ್ವಭಾವಾನಾಂ = ಚೇತನಾಚೇತನಾತ್ಮಕ ಪದಾರ್ಥಗಳಿಗೂ, ಈ ಚತೂರೂಪಿ ಪರಮಾತ್ಮನು ಯಥಾಯೋಗ್ಯವಾಗಿ ಸೃಷ್ಟಿಕಾರಣನಾಗಿದ್ದಾನೆ. ಎಂಬುದು ಸಜ್ಜನರ ನಿಶ್ಚಿತ ಮತವಾಗಿದೆ. ಇತಿ ಸತಾಂ ವಿನಿಶ್ಚಯ ಎಂದು ಹೇಳಿದ್ದರಿಂದ ಅಸಜ್ಜನರು ಇದಕ್ಕಿಂತ ಬೇರೆಯಾಗಿ ಹೇಳುತ್ತಾರೆಂದು ಸಿದ್ಧಿಸುತ್ತದೆ. ಅದು ಹೇಗೆಂದು ಮುಂದಿನ ಮಂತ್ರಗಳಲ್ಲಿ ವಿವರಿಸಲಾಗುತ್ತದೆ. ಸರ್ವ ಪದಾರ್ಥಗಳಿಗೆ ಉತ್ಪಾದಕನೆಂಬ ಪ್ರಮೇಯವನ್ನು ಸರ್ವಂ ಜನಯತಿ ಪ್ರಾಣ ಎಂಬುದರಿಂದ ಹೇಳುವರು.

**ಸರ್ವಸ್ಯ ಪ್ರಣೇತೃತ್ವಹೇತುನಾ ಪ್ರಾಣನಾಮಾ । ಸರ್ವಂ ಜನಯತೀತ್ಯುಕ್ತ್ಯಾ ನ ಪರಿಣಾಮಿ-ತ್ವಾದಿರೂಪಂ ಸರ್ವಪ್ರಭವತ್ವಮಿತ್ಯುಕ್ತಂ ಭವತಿ । ಪುರುಷಃ ಪೂರ್ಣಷಡ್ಗುಣತ್ವಾದಿನಾ ಪುರುಷನಾಮಾ ಪ್ರಾಗುಕ್ತಚತೂರೂಪಾತ್ಮಾಽಪಿ ಹರಿಃ ಚೇತೋಽಂಶೂನ್ ಜ್ಞಾನಾಖ್ಯರಶ್ಮಿಯುಕ್ತಾನ್, ಜೀವಾನಿತಿ, ಯಾವತ್ । ಪೃಥಗ್ ದೇವದಾನವಮಾನವಾದಿಭೇದೇನ ಜನಯತೀತ್ಯರ್ಥಃ ॥ 12 ॥**

ಪುರುಷಃ ಸಂಪೂರ್ಣ ಷಡ್ಗುಣಗಳಿರುವುದರಿಂದ ಪುರುಷನೆಂದು ಭಗವಂತನಿಗೆ ಹೆಸರು. ಸರ್ವಶರೀರಸ್ಥಿತನಾದ ಚತೂರೂಪೀ ಶ್ರೀಹರಿಯನ್ನು ಪುರುಷಶಬ್ದದಿಂದ ತೆಗೆದುಕೊಳ್ಳಬೇಕು. ಚೇತೋಂಶಾನ್ ಜ್ಞಾನರಶ್ಮಿಯುಕ್ತರಾದ ಜೀವನನ್ನು ಪೃಥಕ್ ಎಂದರೆ ದೇವ, ದಾನವ, ಮಾನವಾದಿ ಭೇದದಿಂದ ಸೃಷ್ಟಿಸುತ್ತಾನೆ ಎಂದರ್ಥ.

**ವಿಭೂತಿಂ ಪ್ರಸವಂ ತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ ।**
**ಸ್ವಪ್ನಮಾಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ॥ 13 ॥**

**ಸತಾಮಿತಿ ವಿನಿಶ್ಚಯ ಇತ್ಯತ್ರ ಅಸತಾಂ ವೈಪರೀತ್ಯೇನ ನಿಶ್ಚಯ ಇತ್ಯರ್ಥಾತ್ ಪ್ರಾಪ್ತಮ್ । ತದುಭಯಂ ವ್ಯನಕ್ತಿ – ವಿಭೂತಿಮಿತ್ಯಾದಿನಾ ।**

ಸತಾಮಿತಿ ವಿನಿಶ್ಚಯ ಎಂದಾಗ ಅಸಜ್ಜನರು ಇದಕ್ಕೆ ವಿಪರೀತವಾಗಿ ಹೇಳುತ್ತಾರೆ. ಎಂದು ಅರ್ಥಾತ್ ಪ್ರಾಪ್ತ-ವಾಯಿತು. ಆ ಎರಡನ್ನೂ ಹೇಳುತ್ತಾರೆ. ವಿಭೂತಿಂ ಎಂಬುದರಿಂದ,

**ಸೃಷ್ಟಿಚಿಂತಕಾಃ ಸೃಷ್ಟಿವಿಷಯವಿಚಾರವಂತೋಽನ್ಯೇ ಬ್ರಹ್ಮಪರಿಣಾಮವಾದಿನೋಽಸಂತಃ ಪ್ರಸವಂ ಸೃಷ್ಟಿಂ ವಿಭೂತಿಂ ಜೀವಜಡಾತ್ಮನಾ ವಿವಿಧತಯಾ ಭವನಂ ಬ್ರಹ್ಮಣೋ ಮನ್ಯಂತೇ । ಸೃಷ್ಟಿಚಿಂತಕಾಃ ಇತ್ಯನೇನ ಯಥಾವದ್ ಬ್ರಹ್ಮಸ್ವರೂಪಾನಭಿಜ್ಞಾ ಇತಿ ಸೂಚಿತಮ್ ।**

ಸೃಷ್ಟಿಚಿಂತಕಾಃ ಸೃಷ್ಟಿಸ್ವರೂಪ ವಿಚಾರವಂತರು ತಾವೆಂದು ಅಭಿಮಾನವುಳ್ಳ ಕೆಲವರು ಅಸಜ್ಜನರು, ಪ್ರಸವಂ= ಸೃಷ್ಟಿಯನ್ನು, ವಿಭೂತಿಂ = ಬ್ರಹ್ಮನೇ ಜೀವ-ಜಡಾತ್ಮಕವಾಗಿ ವಿವಿಧವಾಗಿ ಮನ್ಯಂತೇ ತಿಳಿಯುತ್ತಾರೆ.

ಸೃಷ್ಟಿಚಿಂತಕರು ಹೀಗೆ ತಿಳಿಯುವರು ಎಂದದ್ದರಿಂದ ಭಾಸ್ಕರ ಮತದವರು ಬ್ರಹ್ಮನ ಸ್ವರೂಪವನ್ನು ಯಥಾವತ್ತಾಗಿ ತಿಳಿದಿರುವುದಿಲ್ಲವೆಂದು ಸೂಚಿಸಲಾಗಿದೆ.

**ಅನ್ಯೈರ್ಬ್ರಹ್ಮವಿವರ್ತಃ ಪ್ರಪಂಚ ಇತಿ ವಾದಿಭಿಃ ಸೃಷ್ಟಿರ್ವಿಕಲ್ಪಿತಾ ವಿವಿಧತಯಾ ಕಲ್ಪಿತಾ । ಕಥಮ್ ? ಸ್ವಪ್ನಮಾಯಾಸರೂಪೇತಿ । ಸ್ವಾಪ್ನಪದಾರ್ಥಃ ಸುಪ್ತಾತ್ಮವಿವರ್ತೋ ಯಥಾ ತತ್ಸರೂಪಾ ಬ್ರಹ್ಮವಿವರ್ತರೂಪಾ । ಮಾಯಾಸರೂಪಾ, ಮಾಯಾಪದೇನ ಮಾಯಾನಿರ್ಮಿತ ಗಂಧರ್ವನಗರಾದಿ-ಗ್ರಹಃ । ತತ್ಸರೂಪಾ ಮಿಥ್ಯಾಭೂತೇತ್ಯೇವಂ ವಿಕಲ್ಪಿತೇತ್ಯರ್ಥಃ ॥ 13 ॥**

ಅನ್ಯೈಃ ಎಂದರೆ ಈ ಪ್ರಪಂಚವು ಬ್ರಹ್ಮನ ವಿವರ್ತರೂಪವೆನ್ನುವ ವಾದಿಗಳಿಂದ, ಸೃಷ್ಟಿಯು ವಿವಿಧವಾಗಿ ಕಲ್ಪಿತವಾಗಿದೆ ಎಂದರ್ಥ. ಹೇಗೆಂದರೆ, ಹೇಗೆ ಸ್ವಾಪ್ನ ಪದಾರ್ಥಗಳು ಸುಪ್ತನಾದ ಆತ್ಮನಲ್ಲಿ ವಿವರ್ತರೂಪವಾಗಿದೆಯೋ ಹಾಗೆ ಈ ಜಗತ್ತಿನ ಸೃಷ್ಟಿಯೂ ಸಹ ಬ್ರಹ್ಮನಲ್ಲಿ ವಿವರ್ತರೂಪದಿಂದಿದ್ದು ಮಾಯಾಸದೃಶವಾಗಿದೆ ಎನ್ನುವರು. ಮಾಯಾ ಸರೂಪಾವೆಂದರೆ ಐಂದ್ರ ಜಾಲಿಕನು ಸೃಷ್ಟಿಸುವ ಪದಾರ್ಥಗಳಂತೆ ಮಿಥ್ಯಾಭೂತವಾದದ್ದು ಎಂದು ಪರಸ್ಪರ ವಿರುದ್ಧವಾಗಿ ಸ್ವಕಪೋಲ ಕಲ್ಪನೆ ಮಾಡುತ್ತಾರೆ. ಮಾಯಾ ಎಂದರೆ ಮಾಯಾ ನಿರ್ಮಿತ ಗಂಧರ್ವ ನಗರಾದಿಗಳನ್ನು ತೆಗೆದುಕೊಳ್ಳಲು ಅದರಂತೆ ಮಿಥ್ಯಾ-ಭೂತವೆಂಬುದು ಅವರ ಅಭಿಪ್ರಾಯವು.

**ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ ।**
**ಕಾಲಾತ್ ಪ್ರಸೂತಿಂ ಭೂತಾನಾಂ ಮನ್ಯಂತೇ ಕಾಲಚಿಂತಕಾಃ ॥ 14 ॥**

**ಪರಿಣಾಮ-ವಿವರ್ತಯೋರಭಾವೇ ಕಥಂ ಸೃಷ್ಟಿರಿತ್ಯತಃ ಸತಾಂ ನಿಶ್ಚಯಪ್ರಕಾರಮಾಹ - ಇಚ್ಛೇತಿ ।**

ಪರಿಣಾಮವಾಗಲಿ - ವಿವರ್ತವಾಗಲಿ ಒಪ್ಪದಿದ್ದರೆ ಸೃಷ್ಟಿಯಾಗುವ ಬಗೆಯಾದರೂ ಹೇಗೆಂಬ ಸಜ್ಜನರ ಪ್ರಶ್ನೆಗೆ ಸೃಷ್ಟಿಚಿಂತನೆಯನ್ನು ಇಚ್ಛಾಮಾತ್ರಮ್ ಎಂಬುದರಿಂದ ಸ್ಪಷ್ಟಪಡಿಸುತ್ತಾರೆ.

**ಕೇವಲಮಿಚ್ಛಾ ಇಚ್ಛಾಮಾತ್ರಮ್ । ಅನಾಯಾಸೇನ ಅವಿಲಂಬೇನ - ಅವಿಕಾರಿತ್ವೇನ ಚ ಪ್ರಭೋಃ ಪೂರ್ಣಶಕ್ತೇಃ ಸೃಷ್ಟಿಃ ಪ್ರಭುಕರ್ತೃಕಾ ವಿಶ್ವವಿಷಯಿಣೀ ಸೃಷ್ಟಿರಿತಿ ಸೃಷ್ಟೌ ಸೃಷ್ಟಿವಿಷಯೇ, ವಿನಿಶ್ಚಿತಾ - ವಿನಿಶ್ಚಯವಂತೋ ಬ್ರಹ್ಮಾದಯಃ ಸಂತ ಇತ್ಯರ್ಥಃ । ಕರ್ತರಿ ಕ್ತಃ । ಪ್ರಕರ್ಷೇಣ ಭವತಿ = ಶಶ್ವದೇಕ-ಪ್ರಕಾರೇಣ ವರ್ತತ ಇತಿ, ಪ್ರಭವತಿ ಸಮರ್ಥೋ ವರ್ತತ ಇತಿ, ಪ್ರಕರ್ಷೇಣ ಭವತಿ ಅನುಭವತಿ ಅಖಿಲಮಿತಿ । ಪ್ರಭುಪದಸ್ಯ ವ್ಯುತ್ಪತ್ತಿತ್ರಯೇಣ ನಿರ್ವಿಕಾರತ್ವ-ಪೂರ್ಣಶಕ್ತಿತ್ವ-ಸರ್ವಜ್ಞತ್ವ-ರೂಪಾರ್ಥ-ತ್ರಯಪರತ್ವಾತ್ ಪ್ರಭುಪದೇನೈವ ಪರಿಣಾಮವಾದಸ್ಯ, ವಿವರ್ತವಾದಸ್ಯ ಮಾಯಾಸರೂಪತ್ವವಾದಸ್ಯ ಚ ನಿರಾಸೋ ಧ್ಯೇಯಃ ।**

ಇಚ್ಛಾಮಾತ್ರಂ ಎಂದರೆ ಕೇವಲ ಇಚ್ಛೆ ಹೊರತು ಬೇರಾವುದೂ ಅಪ್ರಾಪ್ಯಪ್ರಕಾರವಿರುವುದಿಲ್ಲವೆಂದರ್ಥ ಹಾಗೂ ಅನಾಯಾಸವಾಗಿ ಸೃಷ್ಟಿಸುವುದು ಎಂದರ್ಥ. ಪ್ರಭು ಎಂಬ ಶಬ್ದವು ಪ್ರಕರ್ಷೇಣ ಭವತಿ ಎಂಬರ್ಥದಲ್ಲಿ ಶಶ್ವದೇಕ ಪ್ರಕಾರವಾಗಿರುವನೆಂದೂ, ಪ್ರಭವತಿ ಸಮರ್ಥೋಭವತಿ ಎಂಬ ವ್ಯುತ್ಪತ್ತಿ ಮಾಡಿದಾಗ ಸರ್ವ ಸಮರ್ಥನಾದವನೆಂದೂ, ಸರ್ವಂ ಭವತಿ ಅನುಭವವೆಂಬಂತೆ ಸರ್ವಜ್ಞನೆಂದೂ ತಿಳಿಸಿದ್ದಾರೆ. ಇದರಿಂದಾಗಿ ಪರಿಣಾಮವಾದವನ್ನೂ, ಪೂರ್ಣಶಕ್ತ-ನಾದ್ದರಿಂದ ವಿವರ್ತವಾದವನ್ನೂ, ಸರ್ವಜ್ಞನಾದ್ದರಿಂದ ಮಾಯಾ ಸರೂಪತ್ವವಾದವನ್ನೂ ನಿರಾಸ ಮಾಡಿದ್ದಾರೆಂದು ತಿಳಿಯಬೇಕು. ಹೀಗೆ ಪ್ರಭುವಿನ ಸೃಷ್ಟಿಯು ಅನಾಯಾಸದಿಂದಲೂ ವಿಲಂಬವಿಲ್ಲದೆಯೂ ಯಾವುದೇ ವಿಕಾರವಿಲ್ಲದೆಯೂ ಭಗವಂತನಿಂದ ನಡೆಯುತ್ತದೆ ಎಂದು ಸಜ್ಜನರಾದ ಬ್ರಹ್ಮಾದಿಗಳ ಚಿಂತನೆಯಾಗಿರುತ್ತದೆ.

**ಸತ್ಯಸೃಷ್ಟಾವಶಕ್ತಸ್ಯೈವ ಮಾಯಿಕಸರ್ಜನಾತ್, ಸರ್ವಜ್ಞಸೃಷ್ಟಸ್ಯ ಚ ಸ್ವಾಪ್ನಾರ್ಥಸರೂಪತ್ವಾ-ಯೋಗಾದಿತಿ । ಪುನಃ ಮತಾಂತರಾಣ್ಯಾಹ - ಕಾಲಾದಿತಿ । ಕಾಲಚಿಂತಕಾಃ ಕಾಲಮೇವ ಪರಂ ಮನ್ವಾನಾಃ ಭೂತಾನಾಂ ಪ್ರಸೂತಿಂ ಉತ್ಪತ್ತಿಂ ಕಾಲಾತ್ ಮನ್ಯಂತೇ । ಉಪಲಕ್ಷಣಮೇತತ್ । ವಿರಿಂಚ-ಚಿಂತಕಾಃ ವಿರಿಂಚಾತ್, ರುದ್ರಚಿಂತಕಾಃ ರುದ್ರಾತ್ ಪ್ರಸೂತಿಂ ಮನ್ಯಂತ ಇತ್ಯೇವಂ ಮತಾಂತರಾ-ಣ್ಯಪ್ಯತ್ರ ಧ್ಯೇಯಾನಿ, ತೇಷಾಂ ನಿರಾಸಃ ಪ್ರಭುಪದೇನೈವ ಜ್ಞೇಯಃ ।**

**ಹರೇರೇಕಸ್ಯೈವ ಪೂರ್ಣಶಕ್ತ್ಯಾದಿಮತ್ತ್ವೇನ ಅನ್ಯೇಷಾಂ ತದಭಾವಾದಿತಿ । ಅತ ಏವ ಇಚ್ಛಾ-ಮಾತ್ರಮಿತ್ಯರ್ಥಸ್ಯ ಮಧ್ಯೇ ನಿವೇಶಃ ॥ 14 ॥**

ಸತ್ಯ ಪದಾರ್ಥಗಳನ್ನು ಸೃಷ್ಟಿ ಮಾಡಲು ಅಸಮರ್ಥನು ಮಾತ್ರ ಮಾಯಾಸೃಷ್ಟಿ ಮಾಡುತ್ತಾನೆ. ಭಗವಂತನಾದರೂ ಪರಾಸ್ಯಶಕ್ತಿಃ ವಿವಿಧೈವ ಶ್ರೂಯತೇ ಇತ್ಯಾದಿ ಪ್ರಮಾಣಗಳು ಅಚಿಂತ್ಯಾದ್ಭುತ ಶಕ್ತಿವುಳ್ಳವನೆಂದು ಹೇಳಿದೆಯಾಗಿ ಅವನ ಸೃಷ್ಟಿ ಮಾಯಾ ಸೃಷ್ಟಿಯಲ್ಲ, ಸತ್ಯಸೃಷ್ಟಿಯೇ ಈ ಜಗತ್ತು.

ಮಾಯಾವಿಯು ತನ್ನ ಮಾಯಾ ಸೃಷ್ಟಿ ನೋಡಲಾರ. ಭಗವಂತನಾದರೂ ಸರ್ವಜ್ಞನಾದ್ದರಿಂದ ತಾನು ಸೃಷ್ಟಿಸಿದ್ದನ್ನು ನೋಡುತ್ತಿದ್ದಾನೆ. ಆದ್ದರಿಂದ ಸ್ವಾಪ್ನಪದಾರ್ಥ ಸರೂಪವೆನ್ನಲಾಗದು. ಹಾಗೂ ಸ್ವಪ್ನ ಪದಾರ್ಥಗಳೂ ಸಹ ಸತ್ಯವಾದದ್ದರಿಂದ ಆತ್ಮನಲ್ಲಿ ವಿವರ್ತನಾದನೆಂದು ತಿಳಿಯಬಾರದು. ಕಾಲಾತ್ ಎಂಬುದರಿಂದ ಸೃಷ್ಟಿ ಬಗ್ಗೆ ಇರುವ ಬೇರೆ ಮತಗಳನ್ನೂ ತಿಳಿಸುತ್ತಿರುವರು. ಕಾಲವನ್ನೇ ಸರ್ವೋತ್ತಮವೆಂದು ತಿಳಿದಿರುವವರು ಕಾಲ ಚಿಂತಕರು. ಇವರು ಜೀವಾದಿಗಳ ಸೃಷ್ಟಿಯು ಕಾಲದಿಂದಲೇ ನಡೆಯುವಾಗ ಭಗವಂತನ ಅವಶ್ಯಕತೆ ಒಪ್ಪುವುದಿಲ್ಲ. ಕೆಲವರು ಬ್ರಹ್ಮನೇ ಸರ್ವೋತ್ತಮನಾದ್ದರಿಂದ ಅವನೇ ಈ ಜಗತ್ತಿನ ಸೃಷ್ಟಿಕರ್ತನೆಂದೂ ಮತ್ತೆ ಕೆಲವರು ರುದ್ರನಿಂದಲೇ ಈ ಜಗತ್ತಿನ ಸೃಷ್ಟಿಯೆಂದೂ ತಿಳಿಯುವರು. ಈ ಮತಾಂತರಗಳನ್ನು ಉಪನಿಷತ್ ಕಾಲಾತ್ ಎಂಬ ಪದದಿಂದಲೇ ಸೂಚಿಸಿದೆ. ಕಾಲವು ಜಡವಾದ್ದರಿಂದಲೂ ಬ್ರಹ್ಮಾದಿಗಳು ಚೇತನರಾದರೂ ಅಸ್ವತಂತ್ರರಾದ್ದರಿಂದಲೂ, ಭಗವಂತನು ಸ್ವತಂತ್ರನಾದ್ದರಿಂದಲೂ ಭಗವಂತನೇ ಸೃಷ್ಟಿಕರ್ತನೆಂದು ತಿಳಿಯಬೇಕೆಂದು ಪ್ರಭು ಎಂಬ ಪದವೆ ಮತಾಂತರನಿರಾಸ ಪೂರ್ವಕ ಭಗವಂತನಿಗೆ ಜಗತ್‌ಸೃಷ್ಟಿಕರ್ತೃತ್ವವನ್ನು ಸ್ಥಾಪಿಸುತ್ತದೆ.

**ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ ।**
**ದೇವಸ್ಯೈಷಃ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ ॥ 15 ॥**

**ತರ್ಹಿ ಪೂರ್ಣಸ್ಯ ಸೃಷ್ಟಿಃ ಕಿಮರ್ಥ್ಯೇತ್ಯತೋ ಲೋಕಾನುಗ್ರಹಾರ್ಥಂ ಸ್ವಭಾವ ಇತಿ ವಕ್ತುಂ ಮತಾಂತರಾಣ್ಯಾಹ - ಭೋಗಾರ್ಥಮಿತಿ ।**

ಭಗವಂತನು ಪೂರ್ಣನಾದರೆ ಈ ಸೃಷ್ಟಿಯಿಂದ ಅವನಿಗೇನು ಪ್ರಯೋಜನ ? ಎಂಬ ಶಂಕೆಗೆ ಲೋಕಾನುಗ್ರಹ ಮಾಡುವುದು ಭಗವಂತನ ಸ್ವಭಾವವಾದ್ದರಿಂದ ಭಗವಂತನು ಪರಪ್ರಯೋಜನಕ್ಕಾಗಿ ಸೃಷ್ಟ್ಯಾದಿ ಕಾರ್ಯದಲ್ಲಿ ತೊಡಗುತ್ತಾನೆ ಎಂದುತ್ತರಿಸುತ್ತಾ ಇತರರ ಮತಗಳನ್ನು ವಿಮರ್ಶಿಸುತ್ತಾರೆ. ಭೋಗಾರ್ಥಂ ಎಂಬ ಶ್ಲೋಕದಿಂದ.

**ಹರೇರತೃಪ್ತಸ್ಯೈವ ಭೋಗಾರ್ಥಂ ಸೃಷ್ಟಿಃ ಇತ್ಯನ್ಯೇ ಮನ್ಯಂತೇ । ಅಪರೇ ತು ಮಹಾರಾಜಸ್ಯ ಕಂದುಕಾದಾವಿವ ಕ್ರೀಡಾರ್ಥಂ ವಿಶ್ವಸೃಷ್ಟಿರಿತಿ ಮನ್ಯಂತ ಇತ್ಯರ್ಥಃ ।**

ಪ್ರಲಯಕಾಲದಲ್ಲಿ ಏಕಾಂಗಿಯಾಗಿದ್ದು ಯಾವುದೇ ಭೋಗಾದಿಗಳನ್ನು ಪಡೆಯದೆ ಆಲಸ್ಯ ಹೊಂದಿರುವ ಭಗವಂತನು ಈಗ ತನ್ನ ಭೋಗಕ್ಕಾಗಿ ಈ ಜಗತ್ತನ್ನು ಸೃಷ್ಟಿ ಮಾಡಿ ತೃಪ್ತಿಪಡುತ್ತಾನೆ ಎಂದು ಕೆಲವರು ತಿಳಿಯುವರು. ಮತ್ತೆ ಕೆಲವರು (ರಾಮಾನುಜರು) ರಾಜಾದಿಗಳು ಚೆಂಡಿನಿಂದ ಆಟವಾಡುವಂತೆ ಭಗವಂತನು ಕ್ರೀಡೆಗಾಗಿ ಈ ಜಗತ್ತನ್ನು ಸೃಷ್ಟಿಸುವನೆಂದು ತಿಳಿಯುವರು.

**ಸ್ವಮತಮಾಹ ಶ್ರುತಿಃ - ದೇವಸ್ಯೇತಿ । ದೇವಸ್ಯಾಯಂ ಸೃಷ್ಟ್ಯಾದಿವಿಷಯಃ ಏಷಃ, ಇಚ್ಛಾ, ಇಚ್ಛಾ-**

**ಪೂರ್ವಕವ್ಯಾಪಾರ ಇತಿ ಯಾವತ್ । ಇಷು ಇಚ್ಛಾಯಾಂ ಘಞ್ । ಸ್ವಭಾವ ಏವ ನ ಪ್ರಯೋಜನಾಯ, ಕುತಃ ? ಆಪ್ತಕಾಮಸ್ಯ ಪೂರ್ಣಕಾಮಸ್ಯ ಹರೇಃ ಕಾ ಸ್ಪೃಹಾ ? ನ ಕೋಽಪೀತ್ಯರ್ಥಃ, ಇತಿಶಬ್ದಃ ರೂಪತ್ರಯನಿರೂಪಣಸಮಾಪ್ತೌ ॥ 15 ॥**

ಹೀಗೆ ಪರಮತಾನುವಾದ ಮಾಡಿ ಶ್ರುತಿಯು ಸ್ವಮತವನ್ನು ದೇವಸ್ಯ ಇತ್ಯಾದಿಗಳಿಂದ ತಿಳಿಸುತ್ತದೆ. ಈ ಸೃಷ್ಟ್ಯಾದಿ ವಿಷಯವಾದ ಇಚ್ಛಾಪೂರ್ವಕ ವ್ಯಾಪಾರವು ಭಗವಂತನ ಸ್ವಭಾವ ಹೊರತು ಯಾವುದೇ ಪ್ರಯೋಜನಕ್ಕಾಗಿ ಅಲ್ಲ, ಏಕೆಂದರೆ ಪೂರ್ಣಕಾಮನಾದ ಶ್ರೀಹರಿಗೆ ಯಾವ ಪ್ರಯೋಜನದ ಆಸೆ ಇದ್ದೀತು ? ಯಾವುದೂ ಇಲ್ಲ, ಇತಿ ಶಬ್ದವು ವಿಶ್ವ, ತೈಜಸ ಪ್ರಾಜ್ಞರೂಪತ್ರಯಗಳ ನಿರೂಪಣೆಯ ಮುಕ್ತಾಯ ಸೂಚಿಸುತ್ತದೆ.

*॥ ಇತಿ ಪ್ರಥಮಃ ಖಂಡಃ ॥*

★ ★ ★

# ಅಥ ದ್ವಿತೀಯಖಂಡಃ

**ನಾಂತಃಪ್ರಜ್ಞಂ ನ ಬಹಿಃಪ್ರಜ್ಞಂ ನೋಭಯತಃ ಪ್ರಜ್ಞಂ ನ**
**ಪ್ರಜ್ಞಾನಘನಂ ನ ಪ್ರಜ್ಞಂ ನಾಪ್ರಜ್ಞಮದೃಷ್ಟಮವ್ಯವಹಾರ್ಯ-**
**ಮಲಕ್ಷಣಮಚಿಂತ್ಯಮವ್ಯಪದೇಶ್ಯಮೈಕಾತ್ಮ್ಯಪ್ರತ್ಯಯಸಾರಂ**
**ಪ್ರಪಂಚೋಪಶಮಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ।**
**ಸ ಆತ್ಮಾ ಸ ವಿಜ್ಞೇಯಃ ॥ 1 ॥**

**ಚತುರ್ಥಪಾದಮಾತ್ಮನಃ ಆಹ - ನಾಂತಃಪ್ರಜ್ಞಮಿತಿ । ಅಂತಃಪ್ರಜ್ಞಾಪಯತೀತಿ ಅಂತಃಪ್ರಜ್ಞಃ ಸ್ವಾಪ್ನಾರ್ಥಪ್ರದರ್ಶಕಃ, ಸ ನೇತ್ಯರ್ಥಃ । ನ ಬಹಿಃಪ್ರಜ್ಞಃ । ಜಾಗ್ರದರ್ಥಪ್ರದರ್ಶಕೋ ನ ಭವತಿ । ನೋಭಯತಃಪ್ರಜ್ಞಮ್ । ಬಾಹ್ಯಂ ಶಬ್ದಾದಿಕಂ ಜಾನನ್ ಸ್ವಾಪ್ನಾರ್ಥಾಂಶ್ಚ ಯದಾ ಪಶ್ಯತಿ ಸಾಽಪಿ ಕಾಚಿದ್ದಶಾ ಉಭಯತ ಇತ್ಯನೇನ ಗೃಹ್ಯತೇ । ಉಭಯತಃ ಬಾಹ್ಯಾಭ್ಯಂತರರೂಪಾರ್ಥಾನ್ ಪ್ರಜ್ಞಾಪಯತೀತ್ಯುಭಯತಃಪ್ರಜ್ಞಃ ಸ ನೇತಿ ನೋಭಯತಃಪ್ರಜ್ಞಮ್ । ನ ಪ್ರಜ್ಞಾನಘನಮ್, ಪ್ರಾಗ್ವಿಪರೀತ-ಸಮಾಸಃ, ಘನಪ್ರಜ್ಞಾನಮಿತಿ । ಘನಂ ಅಜ್ಞಾನಾವೃತಂ ಸುಪ್ತಜೀವಸ್ವರೂಪಂ ತದಜ್ಞಾನಂ ವಾ ನ ಪ್ರಜ್ಞಾಪಯತಿ ಪ್ರಾಜ್ಞವದಿತಿ ನಘನಪ್ರಜ್ಞಾನಮ್ । ನಘನಪ್ರಜ್ಞಾನಮೇವ ನ ಪ್ರಜ್ಞಾನಘನಮ್ । ನ ಪ್ರಜ್ಞಂ, ಪ್ರಕರ್ಷೇಣ ಜ್ಞಾಪಯತಿ ಮಾನಸವಾಸನಾಮಯಂ ಧ್ಯೇಯಮ್ । ವಸ್ತ್ವಿತಿ ಪ್ರಜ್ಞಂ ತನ್ನ ಇತಿ ನಪ್ರಜ್ಞಮ್ । ವಿಶ್ವತೈಜಸಪ್ರಾಜ್ಞಾಖ್ಯರೂಪತ್ರಯವ್ಯಾಪಾರಾನ್ ಬಾಹ್ಯಾಭ್ಯಂತರಪದಾರ್ಥಸ್ವರೂಪ-ಜ್ಞಾಪನಸುಪ್ತಸ್ವರೂಪಜ್ಞಾಪನರೂಪಾನ್, ಕಿಂಚಿದ್ಬಾಹ್ಯಕಿಂಚಿತ್ಸ್ವಪ್ನೋಭಯಜ್ಞಾಪನರೂಪವ್ಯಾಪಾರಂ,**

ಸಮಾಧಿಸ್ಥಸ್ಯ ನಿರಂತರಜ್ಞಾನಸಂತತ್ಯುತ್ಪಾದನರೂಪವ್ಯಾಪಾರಂ ಚಾಕುರ್ವದಿತ್ಯರ್ಥಃ । ನೋಭಯತಃಪ್ರಜ್ಞಂ ನ ಪ್ರಜ್ಞಮಿತ್ಯತ್ರ ಕಿಂರೂಪಕರ್ತೃಕಂ ವ್ಯಾಪಾರದ್ವಯಮಸ್ಯ ನೇತ್ಯುಚ್ಯತ ಇತಿ ವಿಚಾರಣೀಯಮ್ । ತರ್ಹಿ ಕಿಂ ನಿರ್ವ್ಯಾಪಾರಮೇವ ಚತುರ್ಥಂ ರೂಪಮ್ ? ನೇತ್ಯಾಹ - ನಾಪ್ರಜ್ಞಮಿತಿ । ಅಪ್ರಜ್ಞಾಪಕಂ ನೇತಿ ನಾಪ್ರಜ್ಞಂ, ಪ್ರಜ್ಞಾಪಕಮೇವ । ಮುಕ್ತಾನಾಂ ಸ್ವಸ್ವಯೋಗ್ಯಸರ್ವಜ್ಞಾನಪ್ರದಾನರೂಪವ್ಯಾಪಾರಕರ್ತೇತ್ಯರ್ಥಃ । ಅದೃಷ್ಟಂ, ವಿಶ್ವಾದಿರೂಪತ್ರಯಂ ಬಾಹ್ಯಾಭ್ಯಂತರಪದಾರ್ಥಜ್ಞಾಪನತದ್‌ವ್ಯವಹಾರರೂಪಕಾರ್ಯಲಿಂಗೇನಾನುಮೇಯಂ, ನ ತಥಾ ಚತುರ್ಥಂ ರೂಪಂ ದೃಶ್ಯಮಿತ್ಯದೃಷ್ಟಮಿತಿ ವಾ, ಅಮುಕ್ತದೃಷ್ಟ್ಯಗೋಚರತ್ವಾದ್ವಾ ಅದೃಷ್ಟಮಿತ್ಯರ್ಥಃ । ಅವ್ಯವಹಾರ್ಯಮಗ್ರಾಹ್ಯಮಿತಿ । ಮುಕ್ತಿಂ ವಿನಾ ತದ್ರೂಪವಿಷಯಕಗ್ರಹಣವ್ಯವಹಾರಯೋರಭಾವಾದವ್ಯವಹಾರ್ಯಮಗ್ರಾಹ್ಯಮಿತ್ಯುಚ್ಯತೇ । ಅಲಕ್ಷಣಂ ಲಕ್ಷಣಮನುಮಾಪಕಂ, ಜಾಗ್ರದಾದಿಪ್ರವೃತ್ತಿರೂಪಾನುಮಾಪಕರಾಹಿತ್ಯಾದಲಕ್ಷಣಮ್ । ಅತ ಏವಾಚಿಂತ್ಯಮ್ । ಅಚಿಂತ್ಯಶಕ್ತಿತ್ವಾದೇವಾವ್ಯಪದೇಶ್ಯಂ ವ್ಯಪದೇಷ್ಟುಮಶಕ್ಯಮ್ । ಐಕಾತ್ಮ್ಯಪ್ರತ್ಯಯಸಾರಂ, ಏಕಃ ಪ್ರಧಾನಃ । ಆತ್ಮಾ ಪೂರ್ಣಃ । ಏಕಶ್ಚಾಸಾವಾತ್ಮಾ ಚ (ಪೂರ್ಣಶ್ಚ) ಏಕಾತ್ಮಾ । ಏಕಾತ್ಮೈವೈಕಾತ್ಮ್ಯಂ, ಸ್ವಾರ್ಥೇ ಷ್ಯಞ್‌ಪ್ರತ್ಯಯಃ । ಪ್ರತ್ಯಯೋ ಜ್ಞಾನರೂಪಃ, ಸಾರ ಆನಂದರೂಪ ಇತ್ಯೈಕಾತ್ಮ್ಯಪ್ರತ್ಯಯಸಾರಮ್ । ಪ್ರಪಂಚೋಪಶಮಂ, ಪಚಿ ವಿಸ್ತಾರೇ, ಪ್ರಪಂಚೋ ವಿಸ್ಮೃತಃ ವ್ಯಾಪ್ತ ಇತಿ ಯಾವತ್ । ಉಪಶಮಃ ಉಪಶಬ್ದೋಽತ್ರೋತ್ಕೃಷ್ಟವಾಚೀ । ಶಮಃ ಸುಖಮ್ । ಉತ್ಕೃಷ್ಟಾನಂದರೂಪಮ್ । ಪ್ರಪಂಚಶ್ಚಾಸಾವುಪಶಮಶ್ಚ ಪ್ರಪಂಚೋಪಶಮಃ ತಮ್ । ಸಾರಮಿತ್ಯುಕ್ತ್ವಾ ಪ್ರತೀತಜೀವಸಾಮ್ಯನಿರಾಸಾಯೋಪಶಮಮಿತ್ಯುಕ್ತಿಃ । ಯದ್ವಾ ದೇಹಸಂಬಂಧಾದ್ಯನಿಷ್ಟಪ್ರಪಂಚಂ ಉಪಶಮಯತಿ ನಿವರ್ತಯತೀತಿ ಪ್ರಪಂಚೋಪಶಮಮಿತಿ । ನಿರ್ದುಃಖಸುಖರೂಪತ್ವಾಚ್ಛಿವಮ್ । ಅದ್ವೈತಂ, ದ್ವೀತಿ ಭಾವಪ್ರಧಾನಂ, ದ್ವಿತ್ವೇನ ವಸ್ತುತತ್ತ್ವಾಪೇಕ್ಷಯಾನ್ಯಾತ್ಮಕತ್ವಾದಿರೂಪದ್ವಿತೀಯೇನ ಪ್ರಕಾರೇಣ ಇತಮ್, ಇಣ್‌ಗತೌ, ಜ್ಞಾತಂ ವಸ್ತು ದ್ವೀತಮ್ । ದ್ವೀತಸ್ಯೇದಂ ದ್ವೈತಂ ಮಿಥ್ಯಾಜ್ಞಾನಮ್, ನ ವಿದ್ಯತೇ ದ್ವೈತಂ ಮಿಥ್ಯಾಜ್ಞಾನಂ ಯಸ್ಮಾತ್ ತದದ್ವೈತಂ, ಅಹಂಮಮತಾದಿಮಿಥ್ಯಾಧ್ಯವಸಾಯನಿವರ್ತಕಮ್ । ಏತಾದೃಶಮಾತ್ಮನಃ ಚತುರ್ಥಪಾದಂ ಮನ್ಯಂತೇ ಬ್ರಹ್ಮಾದಯ ಇತ್ಯರ್ಥಃ । ಏತಸ್ಯ ಸ್ಥಾನಂ ತು 'ವಿಷ್ಣುಸ್ತುರೀಯರೂಪೇಣ ದ್ವಾದಶಾಂತೇ ವ್ಯವಸ್ಥಿತಃ' ಇತಿ ಭಾಷ್ಯದಿಶಾ ಧ್ಯೇಯಮ್ । ಸೋಽಯಮಾತ್ಮಾ ಚತುಷ್ಪಾದಿತಿ ಪ್ರತಿಜ್ಞಾತಂ ವಿಶ್ವತೈಜಸಪ್ರಾಜ್ಞತುರೀಯಾಖ್ಯರೂಪಚತುಷ್ಟಯಂ ಸಪರಿಕರಂ ನಿರೂಪ್ಯ ರೂಪತ್ರಯವಿಷಯೇ ಮಂತ್ರಾನುದಾಹೃತ್ಯ, ಚತುರ್ಥವಿಷಯೇ ಮಂತ್ರಾನುದಾಹರಿಷ್ಯನ್ನಿದಾನೀಂ ಚತೂರೂಪ ಆತ್ಮಾಽವಶ್ಯಂ ಜ್ಞಾತವ್ಯ ಇತಿ ವದನ್ನುಪಸಂಹರತಿ - ಸ ಆತ್ಮೇತಿ । ಯ ಇತಿ ಶೇಷಃ । ಸ ಚತೂರೂಪೋ ಯ ಆತ್ಮಾ ಸ ವಿಜ್ಞೇಯಃ ವಿವಿಧತಯಾ ವಿಶೇಷೇಣ ಮುಮುಕ್ಷುಭಿರ್ಜ್ಞೇಯ ಇತಿ ॥ 1 ॥

ಮೊದಲನೆಯ ಖಂಡದಲ್ಲಿ ಜಾಗ್ರದವಸ್ಥಾ ನಿಯಾಮಕ ವಿಶ್ವಸ್ವಪ್ನಾವಸ್ಥಾ ನಿಯಾಮಕ ತೈಜಸ ಸುಷುಪ್ತಿ ಅವಸ್ಥಾ-ನಿಯಾಮಕ ಪ್ರಾಜ್ಞ ರೂಪಗಳನ್ನು ವಿವರಿಸಿ, ಶೃತಿಯು ಈ ದ್ವಿತೀಯ ಖಂಡದಲ್ಲಿ ಮುಕ್ತಿ ದೆಶೆಯಲ್ಲಿ ನಿಯಾಮಕನಾದ ಪರಮಾತ್ಮನ ತುರೀಯ ರೂಪವನ್ನು ಉಪದೇಶಿಸುತ್ತದೆ.

ಕಣ್ಣು, ಕಂಠ ಮತ್ತು ಹೃತ್ಕರ್ಣಿಕಾಗ್ರ ಸ್ಥಾನಗಳು ವಿಶ್ವ-ತೈಜಸ-ಪ್ರಾಜ್ಞರಿಗೆ ಸ್ಥಾನಗಳಾಗಿದ್ದಂತೆ ನಾಸಿಕಾ ಮೂಲದಿಂದ ಹನ್ನೆರಡು ಅಂಗುಲಗಳ ಮೇಲೆ ಮಸ್ತಕದ ಮಧ್ಯದ ಸ್ಥಾನವು ಪರಮಾತ್ಮನ ತುರೀಯ ರೂಪದ ಸ್ಥಾನವು. ಈ ತುರೀಯ ರೂಪವು ತೈಜಸನಂತೆ ಅಂತರ, ವಾಸನಾಮಯ, ಸ್ವಾಪ್ನ ಪದಾರ್ಥಗಳ ಜ್ಞಾನವನ್ನು ಮಾಡಿಕೊಡುವುದಿಲ್ಲ, ವಿಶ್ವದ ಹಾಗೆ ಬಾಹ್ಯ ಪದಾರ್ಥಗಳ ಜ್ಞಾನವನ್ನು ಮಾಡಿಕೊಡುವುದಿಲ್ಲ, ಈ ಎರಡನ್ನೂ ತಿಳಿಸಿಕೊಡುವ ಇನ್ನೊಂದು ಅವಸ್ಥೆಯಿದೆ. ಅಂತಹ ಜ್ಞಾನವನ್ನು ಅಂದರೆ ಉಭಯತಃ ಪ್ರಜ್ಞೆಯನ್ನು ವಿಶ್ವ ತೈಜಸರು ಇಬ್ಬರೂ ಸೇರಿ ಮಾಡಿಕೊಡುವರು. ತುರೀಯನು ಜೀವನಿಗೆ ಸುಷುಪ್ತಿ ದೆಶೆಯಲ್ಲಿ ಜೀವನ ಸ್ವರೂಪ, ಅಜ್ಞಾನ, ಕಾಲ, ಮತ್ತು ಸುಷುಪ್ತಿ ಸುಖಗಳ ಅರಿವನ್ನು ಪ್ರಾಜ್ಞನಂತೆ ಸಮಾಧ್ಯವಸ್ಥೆಯಲ್ಲಿರುವ ಜೀವನಿಗೆ ನಿರಂತರ ಜ್ಞಾನವನ್ನು ಮಾಡಿಕೊಡುವುದಿಲ್ಲ.

ಹಾಗಾದರೆ ತುರೀಯನಿಗೆ ಯಾವ ವ್ಯಾಪಾರ ಇಲ್ಲವೇ ? ಹಾಗೇನಿಲ್ಲ, ನಾಪ್ರಜ್ಞಂ ಚರಮ-ದೇಹವನ್ನು ತೊರೆದು ಮುಕ್ತಿಯನ್ನು ಸೇರಿದ ಜೀವರಿಗೆ ಜ್ಞಾನವನ್ನು ಕೊಡದೆ ಇರುವುದಿಲ್ಲ, ಮುಕ್ತರಿಗೆ ಅವರವರ ಯೋಗ್ಯತಾನುಸಾರ ಸರ್ವಜ್ಞಾನವನ್ನು ತುರೀಯನು ನೀಡಿಯೇ ತೀರುತ್ತಾನೆ. ವಿಶ್ವಾದಿ ಮೂರು ರೂಪಗಳು ಒಳ ಹೊರಗಿನ ಪದಾರ್ಥಗಳನ್ನು ತಿಳಿಸುವ ವ್ಯವಹಾರ ಮೂಲಕವಾಗಿ ಅನುಮೇಯವಾಗಿದೆ. ಹಾಗೆ ಈ ತುರೀಯನು ಅನುಮೇಯನಲ್ಲ, ಅಥವಾ ಆಯುಕ್ತರ ಜ್ಞಾನಕ್ಕೆ ಗೋಚರನಲ್ಲ, ಮುಕ್ತಿಯಿಲ್ಲದೇ ವ್ಯವಹರಿಸಲು ಬಾರದವನು ಅನುಮಾಪಕ ಲಕ್ಷಣಗಳಿಲ್ಲದವನು. ಅನುಮಾಪಕ ಲಕ್ಷಣಗಳಿಲ್ಲದಿರುವ ಕಾರಣದಿಂದಲೇ ಚಿಂತನೆಗೆ ನಿಲುಕದವನು. ನಿರ್ದಿಷ್ಟವಾಗಿ ಹೇಳಲು ಬಾರದವನು ಏಕ ಅಂದರೆ ಸರ್ವೋತ್ತಮವಾದ ಆತ್ಮ ಗುಣ ಪೂರ್ಣವಾದ ರೂಪವಿರುವುದರಿಂದ ಐಕಾತ್ಮ್ಯನು. ಪ್ರತ್ಯಯ ಜ್ಞಾನರೂಪನು ಸಾರ ಆನಂದರೂಪನು. ಈ ಎಲ್ಲ ಗುಣಗಳಿರುವ ಕಾರಣ ಐಕಾತ್ಮ್ಯ ಪ್ರತ್ಯಯ ಸಾರನು. ವ್ಯಾಪ್ತನಾದ್ದರಿಂದ ಪ್ರಪಂಚನೂ, ಉತ್ತಮಾನಂದ ಸ್ವರೂಪನಾದ್ದರಿಂದ ಉಪಶಯನೂ ಆಗಿರುವನು. ಹೀಗೆ ತುರೀಯನು ಪ್ರಪಂಚೋಪಶಮ - ನೆನಸಿರುವನು. ಅಥವಾ ಪ್ರಪಂಚ ಎಂದರೆ ದೇಹಸಂಬಂಧ, ಈ ದೇಹ ಸಂಬಂಧವನ್ನು ಕಳೆಯುವುದರಿಂದಲೂ ಇವನು ಪ್ರಪಂಚೋಪಶಯನು.

ಸಾರ ಆನಂದರೂಪನೆಂದರೆ ಜೀವನು ಆಗುವನು. ಭಗವಂತನು ಹಾಗಲ್ಲ ಎನ್ನುವುದಕ್ಕಾಗಿ ಉಪ-ಉತ್ಕೃಷ್ಟ - ಆನಂದವುಳ್ಳವ ಅಂದರೆ ಉತ್ತಮಾನಂದಸ್ವರೂಪನು ಎನ್ನುತ್ತದೆ, ಶ್ರುತಿ,ಜೀವನು ಆನಂದರೂಪನು. ಭಗವಂತ ಉತ್ತಮಾನಂದ ಸ್ವರೂಪ. ಕಾರಣ ಜೀವಾಭೇದ ಇಲ್ಲಿ ಪ್ರತಿಪಾದಿತವಲ್ಲವೆಂದು ಭಾವ. ನಿರ್ದುಃಖ ಸುಖ ರೂಪನಾದ್ದರಿಂದ ಶಿವನು ದ್ವೈತ ಎಂದರೆ ಅಯಥಾರ್ಥಜ್ಞಾನ, ವಸ್ತುವಿನ ಸ್ವರೂಪವನ್ನು ಬಿಟ್ಟು ಬೇರೆಯಾಗಿ ತಿಳಿಯುವುದು. ಅಂತಹ ನಾನು ನನ್ನದು ಎನ್ನುವ ವಿದ್ಯಾಜ್ಞಾನವನ್ನು ಕಳೆಯುವವನು. ಇಂಥ ತುರೀಯ ರೂಪವು ಶ್ರೀ ಹರಿಯ ನಾಲ್ಕನೇ ರೂಪವೆಂದು ಬ್ರಹ್ಮಾದಿ ಜ್ಞಾನಿಗಳು ತಿಳಿಯುತ್ತಾರೆ. ಇಂತಹ ಚತೂರೂಪನಾದ ಆತ್ಮವನ್ನು ಮುಮುಕ್ಷುಗಳು ವಿಶೇಷವಾಗಿ ತಿಳಿಯ-ಲೇಬೇಕು.

**ವಿವರಣೆ :** ಪ್ರಪಂಚೋಪಶಯ ಎನ್ನುವಲ್ಲಿ ಪಚಿ ವಿಸ್ತಾರೆ ಎನ್ನುವ ಕ್ರಿಯಾ ಪದವು ವಿಸ್ತಾರ ಎನ್ನುವ ಅರ್ಥದಲ್ಲಿದೆ. ಪ್ರಪಂಚ-ಪ್ರಕೃಷ್ಟವಾದ, ವಿಸ್ತಾರ, ಅಂದರೆ ವ್ಯಾಪ್ತನು ಎಂದು ಭಾವ. ಅದ್ವೈತಂ- ದ್ವಿತ್ವೇನ ಇತಂ ದ್ವೈತಂ, ವಸ್ತುವಿನ

ನಿಜಸ್ವರೂಪಕ್ಕಿಂತಲೂ ಭಿನ್ನವಾದ ಎರಡನೆ ರೀತಿಯಾಗಿ ತಿಳಿಯಲ್ಪಟ್ಟ ವಸ್ತು ದ್ವೀತ, ಇಣ್‌ಗತೌ ಧಾತುವಿನಿಂದ ಇತ ಶಬ್ದ ನಿಷ್ಪನ್ನವಾಗಿದೆ. ದ್ವೀತವೇ ದ್ವೈತ ಎನಿಸಿದೆ. ಇಂತಹ ದ್ವೈತವು (ಮಿಥ್ಯಾ ಜ್ಞಾನವು) ಯಾವನಿಂದ ನಿವೃತ್ತಿಯಾಗುವುದೋ ಅವನು ಅದ್ವೈತ ॥ 1 ॥

ಮಂತ್ರ ನಿರೂಪಿಸುವ ತುರೀಯನ ಮಹಿಮೆ

**ಚತುರ್ಥರೂಪಸ್ಯೋಕ್ತಂ ಮಾಹಾತ್ಮ್ಯಂ ಸಂವಾದಯಿತುಮಾಹ - ಅತ್ರೈತ ಇತಿ ।**

**ಅತ್ರೈತೇ ಶ್ಲೋಕಾ ಭವಂತಿ ।**

**ನಿವೃತ್ತೇಃ ಸರ್ವದುಃಖಾನಾಮೀಶಾನಃ ಪ್ರಭುರವ್ಯಯಃ ।**

**ಅದ್ವೈತಃ ಸರ್ವಭಾವಾನಾಂ ದೇವಸ್ತುರ್ಯೋ ವಿಭುಃ ಸ್ಮೃತಃ ॥ 2 ॥**

**ತುರೀಯಸ್ಯೋಕ್ತಾರ್ಥ ಏತೇ ವಕ್ಷ್ಯಮಾಣಾ ಬ್ರಹ್ಮದೃಷ್ಟಾಃ ಶ್ಲೋಕಾಃ ಸಂವಾದಿನೋ ಭವಂತೀ-ತ್ಯರ್ಥಃ । ಪ್ರಪಂಚೋಪಶಮಮಿತ್ಯಾದಿನೋಕ್ತೇಂ ಸರ್ವಾನಿಷ್ಟನಿವರ್ತಕತ್ವಾದಿರೂಪೇಽರ್ಥೇ ಶ್ಲೋಕ-ಮಾಹ- ನಿವೃತ್ತೇರಿತಿ । ಸರ್ವದುಃಖಾನಾಂ ನಿವೃತ್ತೇಃ ಕಾರಣಮಿತಿ ಶೇಷಃ । ಈಶಾನಃ ಈಶಾನ್ ಮುಕ್ತಾನನತಿ ಪ್ರೇರಯತೀತೀಶಾನಃ । ಪ್ರಭುಃ ಸ್ವಾಮೀ । ಅವ್ಯಯಃ ಶಶ್ವದೇಕಪ್ರಕಾರಃ । ಅದ್ವೈತಃ ಮಿಥ್ಯಾಜ್ಞಾನನಿವರ್ತಕಃ । ಸರ್ವಭಾವಾನಾಂ ಸರ್ವಜೀವಾನಾಮ್ । ವಿಷ್ಣೋಃ ಭವಂತಿ ಜಾಯಂತ ಇತಿ ವಾ । ಭುಕ್ ಶುದ್ಧಿಚಿಂತಯೋಃ - ಇತಿ ಕವಿಕಲ್ಪದ್ರುಮೋಕ್ತ್ಯಾ ಚಿಂತಾರ್ಥಸ್ಯ ವಾ ಭವತೇರ್ಣ-ಪ್ರತ್ಯಯೇ ಭಾವ ಇತಿ ಸಿದ್ಧ್ಯಾ ಭಾವಾಶ್ಚೇತನಾ ಇತಿ ಲಾಭಾತ್, ತೇಷಾಂ ಜೀವಾನಾಂ ದೇವಃ ಪ್ರಾಪ್ಯಃ । ಗತ್ಯರ್ಥಾದ್ದೀವ್ಯತೇಃ ಕರ್ಮಣಿ ಘಞ್‌ಪ್ರತ್ಯಯಃ । ತುರ್ಯಸ್ತುರೀಯಶ್ಚತುರ್ಥಃ । ಚತುರ-ಶ್ಛಯತಾವಾದ್ಯಕ್ಷರಲೋಪಶ್ಚ ಇತಿ ಚತುಶ್ಯಬ್ದಸ್ಯಾದ್ಯಾಕ್ಷರಲೋಪೇ ಯತ್ಪ್ರತ್ಯಯೇ ತುರ್ಯ ಇತಿ ಸಿದ್ಧೇಃ । ವಿಭುಃ ಸಮರ್ಥಃ । ಸ್ಮೃತಃ ಮಂತ್ರದ್ರಷ್ಟ್ರಾ ಬ್ರಹ್ಮಣೇತಿ ಯೋಜ್ಯಮ್ ॥ 2 ॥**

ಭಗವಂತನ ನಾಲ್ಕು ರೂಪಗಳಲ್ಲಿ ಕಡೆಯದ್ದು ತುರೀಯ ರೂಪ. ಈ ರೂಪವೂ ಹಿಂದಿನಂತೆ ಸರ್ವದುಃಖಗಳನ್ನು ಪರಿಹರಿಸಲು ಸಮರ್ಥವಾಗಿದೆ. ಮುಕ್ತಾಮುಕ್ತ ಸರ್ವರಿಗೂ ನಿಯಾಮಕನಾಗಿರುವ, ಪ್ರಭು(ಸ್ವಾಮಿ)ವಾಗಿ ಅವ್ಯಯ (ನಾಶರಹಿತ)ವಾಗಿ ಯಾವ ವಿಕಾರಗಳಿಗೂ ಒಳಗಾಗದೇ ಒಂದೇ ರೀತಿಯಲ್ಲಿರುವವನು. ಅನ್ಯಥಾಜ್ಞಾನವನ್ನು ಹೋಗಲಾಡಿಸಿ ಸಮೀಚೀನ ಜ್ಞಾನವನ್ನು ಕೊಡುವವನಾಗಿದ್ದಾನೆ.

ಭಗವಂತನ ಚತುರ್ಥರೂಪವಾದ ತುರೀಯ ರೂಪದ ಮಹಾತ್ಮ್ಯೆಯನ್ನು ಇಲ್ಲಿ ತಿಳಿಸುವರು. ತುರೀಯವೆಂಬ ಭಗವಂತನ ರೂಪ ತಿಳಿಸಿರುವಂತೆ ಬ್ರಹ್ಮದೇವರು ಕಂಡುಕೊಂಡಂತೆ ಸಂವಾದಿಗಳಾಗಿವೆ. ಈ ರೂಪವೂ ಇತರ ರೂಪಗಳಂತೆ ಸರ್ವ ದುಃಖಗಳನ್ನು ಕಳೆಯುವುದಾಗಿ ತಿಳಿಸಿರುವುದಾಗಿದೆ. ಈಶಾನಃ - ಮುಕ್ತರಾದವರಿಗೂ ಚೇಷ್ಟಪ್ರದವಾಗಿ ನಿಯಾಮಕ. ಪ್ರಭುಃ - ಸರ್ವಸ್ವಾಮಿ, ಅವ್ಯಯಃ - ಯಾವ ನಾಶವೂ ಇಲ್ಲದೇ ಶಶ್ವದೇಕಪ್ರಕಾರನಾದವನು. ಅದ್ವೈತಃ - ಮಿಥ್ಯಾಜ್ಞಾನವನ್ನು (ಅಯಥಾರ್ಥಜ್ಞಾನ) ಕಳೆಯುವವನು. ಭಾವ - ಸರ್ವಜೀವರಿಗೂ ಜೀವನಪ್ರದನು. ಮುಕ್ತಾತ್ಮರಿಗೂ

